ಅಖಿಲಸೇವಾ ಗ್ರಂಥಮಾಲೆಯ ಐದನೆ ಕುಸುಮ.

# ನಮ್ಮ ಕತೆಗಳು.



ಮಿತ್ರಮಂಡಳಿ, ಮಂಗಳೂರು.



ಸರಸ್ವತೀ ಪ್ರಿಂಟಿಂಗ್ ವರ್ಕ್ಸ್, ಲಿಮಿಟೆಡ್, ಮಂಗಳೂರು.



1933.

ಬೆಲೆ: ಆರಾಣೆ.

# ಮೂರು ಮಾತು.

ಇವು ನಮ್ಮ ಕತೆಗಳು. ಇವುಗಳನ್ನು ಸಣ್ಣಕತೆಗಳೆಂದೂ ಹೇಳಲಾರೆವು; 'ಕಥೆ'ಗಳೆಂದೂ ಬರೆಯಲಾರೆವು. ಪ್ರತಿಯೊಂದು ಕತೆಯೂ ಸುಖದುಃಖದ ಹೊನಲು; ಪ್ರತಿಯೊಂದು ಕತೆಯೂ ಪ್ರಕೃತಿಗೆ ಸಹಜವಾದುದು; ಕಡೆಗೆ, ಪ್ರತಿಯೊಂದೂ ಸಂಸಾರದ ಅನುಭವಾಮೃತವು. ಎಂಬುದಿಂತಿಷ್ಟೆ ಹೇಳಬಲ್ಲೆವು.

ಈ ಕತೆಗಳ ವಿಷಯ ಬೇರೆ ಹೇಳಬೇಕೆಂದಿಲ್ಲ. 'ಅಂಧಶಿಲ್ಪಿ'ಯಲ್ಲಿ ಭೀಕರ ದಡಿಯ ತಾಳ್ಮೆಯ ಜೀವನವು ಹರಿಯುವುದಾದರೆ, 'ಹಣೆಬರಹ'ದಲ್ಲಿ ಕಲ್ಲಿನಂತಹ ದೃಢಮನಸ್ಸು ಎದ್ದು ನಿಂತಿದೆ. 'ದೀಪಾವಳಿ'ಯಲ್ಲಿ ದುಃಖವು ಮರೆಯಿಸಲ್ಪಟ್ಟಷ್ಟು ಗುಣೀಕೃತವಾಗುವುದಾದರೆ, 'ತಿರುಪೆಯವಳ' ದುಃಖವನ್ನು ವಿಧಿಯೆ ಕೊನೆಗಾಣಿಸುವನು. 'ಕೂಲಿ'ಯು ಪತಿವ್ರತೆಯೊಬ್ಬಳ ಚಿತ್ರವನ್ನು ಕಣ್ಣ ಮುಂದೆ ಕಟ್ಟಿದರೆ, 'ಲೇಖನ ವ್ಯವಸಾಯವು' ಸತೀವ್ರತತ್ವದ ಕಷ್ಟವನ್ನು ಮನಗಾಣಿಸುತ್ತದೆ. ಸಂಸಾರಿಗಳ ಅವಿವೇಕವನ್ನು 'ದೊಡ್ಡಣ್ಣ'ನಲ್ಲಿಯೂ 'ವಿಮೋಚನೆ'ಯಲ್ಲಿಯೂ ಕಂಡು, 'ನಿರಪರಾಧಿ'ಯಿಂದ ಸಂಸಾರ ತಾನೆ ಅಪರಾಧಿಯಲ್ಲವೆಂದು ಖಚಿತಪಡಿಸಬಹುದು. ನಮ್ಮ ಕತೆಗಳೆಲ್ಲ ನಮ್ಮ ಸಂಸಾರವೆ. ಆದರೆ, ನಮ್ಮ ಸಂಸಾರವೆಲ್ಲ ನಮ್ಮ ಕತೆಗಳಲ್ಲ; ಅದಿನ್ನೂ ಹರಿಯುತಿದೆ. ನಮ್ಮ ಕತೆಗಳಿವು ಹಿಂದಕ್ಕೆ ನಿಂತು ಲೋಕಸಂಗ್ರಹ ಮಾಡುವ ಸಣ್ಣ ದೊಡ್ಡ ಸಂಕಗಳು. 'ನಮ್ಮ ಕತೆ'ಗಳಿವು ನಿಮ್ಮ ಕತೆಗಳೂ ಆಗಿದ್ದರೆ, ನಾವಿನ ಕತೆಗಳೆಂದೇ ಹೇಳಬಲ್ಲೆವು.

ಇವುಗಳಲ್ಲಿ 'ತಿರುಪೆಯವಳು' **ಕಥಾಂಜಲಿ**ಯಲ್ಲೂ, 'ದೊಡ್ಡಣ್ಣ' ವೆಂಬುದು **ಉದಯಭಾರತ**ದಲ್ಲೂ, 'ವಿಮೋಚನೆ'ಯೆಂಬುದು **ಕಂಠೀರವ**ದಲ್ಲೂ ಈ ಮುಂಚೆ ಪ್ರಕಟಗೊಂಡಿವೆ. ಸಂಬಂಧಪಟ್ಟ ಸಂಪಾದಕರಿಗೆ ನಮ್ಮ ವಂದನೆಗಳು.

ಈ ಹೊತ್ತು, ಈ ಪುಸ್ತಕವನ್ನು ಪ್ರಕಟಿಸುವ ಸಭೆಗೆ ಅಧ್ಯಕ್ಷರಾಗಿ ನಮ್ಮನ್ನು ಆಶೀರ್ವದಿಸುವ ಶ್ರೀ। ಪಂಜೆ ಮಂಗೇಶರಾವ್, ಬಿ. ಎ., ಎಲ್. ಟಿ. ಯವರಿಗೆ ನಮ್ಮ ಧನ್ಯವಾದಗಳನ್ನು ಈ ಮೂಲಕ ಅರ್ಪಿಸುತ್ತೇವೆ.

**ಮಿತ್ರಮಂಡಳಿ, ಮಂಗಳೂರು,**
ತಾ. 20—11—1932.

**ಜೆ. ವಾಮನ ಭಟ್,** ಬಿ. ಎ.,
ಅಧ್ಯಕ್ಷ.

# ಕತೆಗಳೂ ಕತೆಗಾರರೂ.



## ನಮ್ಮ ಗ್ರಂಥಗಳು.

೧. **ಅಖಿಲ ಸೇವೆ.**

೨. ,, **ದ್ವಿತೀಯ ಖಂಡ.**

೩. ತಾಯ್ನಾಡು.

೪. ಅಲರು.

೫. ನಮ್ಮ ಕತೆಗಳು.

೬. (ವಿನೋದ ಚಿತ್ರಗಳು—ಅಚ್ಚಿನಲ್ಲಿದೆ.)



# ಅಂಧ ಶಿಲ್ಪಿ.

೧.




ಮಿಚಂದ್ರನು ಅದ್ವಿತೀಯ ಶಿಲ್ಪಿ. ಪಾಪ, ಕುರುಡ! ಕುರುಡನಾದರೂ ಅವನ ಗೊಂಬೆಗಳು ಕುರುಡನು ಮಾಡಿದ ಗೊಂಬೆಗಳಂತಿರಲಿಲ್ಲ. ಅವುಗಳಲ್ಲೊಂದು ಸ್ವಾಭಾವಿಕವಾದ ಶೋಭೆಯೂ ಸಹಜವಾದ ರಮಣೀಯತೆಯೂ ತುಂಬಿ ತುಳುಕುತಲಿದ್ದುವು. ಆತನ ದೃಷ್ಟಿಯು ಕಣ್ಣುಗಳಿಂದ ಹೊರಹೊರಡುವ ಬದಲು, ಕೈಬೆರಳುಗಳಿಂದ ಹೊರಸೂಸಿ, ನಿರ್ಜೀವ ಮಣ್ಣಿಗೆ ಜೀವಕಲೆಯನ್ನು ಕೊಡುತಿದ್ದಿತೋ ಎಂದು ಭಾಸವಾಗುತಲಿತ್ತು.

ನೇಮಿಚಂದ್ರನು ಕಣ್ಣುಗಳನ್ನು ಕಳೆದುಕೊಳ್ಳುವುದರ ಮೊದಲು, ಗೊಂಬೆಗಳನ್ನು ಮಾಡುವ ವೃತ್ತಿಯಿಂದಲೇ ಜೀವನಮಾಡುತಿದ್ದನು. ದಿನಂಪ್ರತಿಯೂ ಹೊಸಹೊಸ ಗೊಂಬೆಗಳನ್ನು ಮಾಡಿ ಮಾರ್ಗದ ಬಳಿಯಲ್ಲಿಟ್ಟು ಕುಳಿತುಕೊಳ್ಳುವನು. ಚಿಕ್ಕ ಮಕ್ಕಳೂ ಪೇಟೆಗೆ ಬಂದ ಹೊಸಬರೂ ಅವುಗಳನ್ನು ಕೊಂಡುಕೊಳ್ಳುತಿದ್ದರು. ನೇಮಿಚಂದ್ರನಿಗೆ ಮಕ್ಕಳೆಲ್ಲರೂ ಗೆಳೆಯರು. ಅವನ ಹೃದಯವೂ ಎಳೆಯ ಮಕ್ಕಳ ಹೃದಯದಂತೆ ಪವಿತ್ರವಾಗಿತ್ತು. ಹುಡುಗರನ್ನು ಸಂತೋಷಗೊಳಿಸುವುದಕ್ಕಾಗಿ ಅವನೆಷ್ಟೋ ವೇಳೆ ಮಣ್ಣನ್ನು ಕೈಗೆ ತೆಗೆದುಕೊಂಡು ಅಪೂರ್ವ ಕೌಶಲ್ಯದಿಂದ ಎತ್ತಿನ ಕೊಂಬುಗಳುಳ್ಳ ಮೊಸಳೆಗಳನ್ನೋ ಗರಿಗಳುಳ್ಳ ಕುದುರೆಗಳನ್ನೋ ಮಾಡಿ ತೋರಿಸಿದುದಿದೆ. ನೇಮಿಚಂದ್ರನಂತೆ ತಮಗೆ ಅಷ್ಟು ಬೇಗ ಅಂತಹ ಪ್ರಾಣಿಗಳನ್ನು ನಿರ್ಮಿಸಿಕೊಡಬಲ್ಲವರು, ಬೇರೊಬ್ಬರಿಲ್ಲೆಂದು ಮಕ್ಕಳಿಗೆ ಚೆನ್ನಾಗಿ ಗೊತ್ತು. ಆದುದರಿಂದಲೇ ಅವನ ಮೇಲೆ ಅವರಿಗೆ ಅಷ್ಟು ಮಮತೆ, ಸಲಿಗೆ.

"ಅಮ್ಮಾ, ನಂಗೆ ಅದು ಬೇಕಮ್ಮಾ."

"ಅದು ಬೇಡ ಮುದ್ದು. ಅದಕ್ಕೆ ಅರ್ಥವಿಲ್ಲ. ಏನೋ ಹುಚ್ಚು ಹುಚ್ಚಾಗಿ ಮಾಡಿದ್ದಾನೆ. ನಿನಗೆ ಈ ಎರಡು ಎತ್ತುಗಳನ್ನು ತೆಗೆದು ಕೊಡುವೆನು. ಎಷ್ಟು ಚಂದ!"

ಮಗುವು ದೊಡ್ಡವರ ಹುಚ್ಚುತನಕ್ಕೆ ಮರುಗುತ್ತ, ಎತ್ತುಗಳನ್ನು ತೆಗೆದುಕೊಂಡು ಹೊರಟುಹೋಗುವುದು. ನೇಮಿಚಂದ್ರನು ಕಾಣುವಷ್ಟು ಕಾಲ ಮಗುವನ್ನು ಕನಿಕರದಿಂದ ದಿಟ್ಟಿಸಿ ನೋಡುವನು. ಮಗುವು ಅವನನ್ನೇ ನೋಡುತ್ತಾ ನೋಡುತ್ತಾ, ತಾಯಿಯೊಂದಿಗೆ ನಿರ್ವಾಹವಿಲ್ಲದೆ ಹೊರಟುಹೋಗುವುದು.

ನೇಮಿಚಂದ್ರನೂ ನಿಟ್ಟುಸಿರು ಬಿಡುತ್ತಾ, ಆ ಕೌತುಕ ಪ್ರಾಣಿಗಳನ್ನು ತನ್ನ ಚೀಲದಲ್ಲಿ ಅಡಗಿಸುವನು.

ಇದೆಲ್ಲಾ ಹಿಂದಿನ ಮಾತು. ನೇಮಿಚಂದ್ರನೀಗ ಕುರುಡ. ಅವನ ಬೆರಳುಗಳ ಮೊದಲಿನ ಕೌಶಲವು ಬೇರೆ; ಈಗಿನದು ಬೇರೆ. ಮೊದಲಿನ ನೇಮಿಚಂದ್ರನು ಚಿರಹಸನ್ಮುಖಿ; ಈಗಿನವನು ನಿರಂತರ ದುಃಖಿ.

ನೇಮಿಚಂದ್ರನಿಗೆ ಹಳ್ಳಿಗೆ ಹೋಗಿ ಜೀವಿಸಬಹುದಾಗಿತ್ತು. ಕುರುಡರಿಗೆ ಹಳ್ಳಿಯೇ ಸುಖಮಯವಾದ ನಿವಾಸಭೂಮಿ. ನದಿಯ ಭೋರ್ಗರೆವ ಶಬ್ದ; ಪಕ್ಷಿಗಳ ಕಲಕಲ ರವ; ದನಕರುಗಳು ಸಂಜೆ ಮನೆಗೆ ಬರುವ ಗಲಭೆ; ಗೋವಳರ ಹಾಡು; ಮಕ್ಕಳ ಕಿಲಕಿಲ ನಗು; 'ವಾಕ್ಯವ್ಯಯದಲ್ಲಿ ದಾತರಾದ' ಹೆಂಗಸರ ಮಾತು; ಗಂಡಹೆಂಡಂದಿರ ಪ್ರಣಯಕಲಹ;—ಇವೇ ಮುಂತಾದುವು ಕುರುಡರ ಗೀತ! ಇವುಗಳಲ್ಲೇ ಕುರುಡರು ತಮ್ಮನ್ನು ತಾವೇ ಮರೆತುಕೊಳ್ಳಬಲ್ಲರು. ಇವೇ ಕುರುಡರ ಕಿವಿಯಲ್ಲಿ ಅಜಸ್ರಧಾರೆಯಾಗಿ ಮಧುವರ್ಷಣವನ್ನು ಮಾಡುತಿರುವವು. ಕುರುಡರಿಗೆ ಹಳ್ಳಿಯಲ್ಲಿ ಭಯವಿಲ್ಲ. ಸರ್ವಕಾಲಗಳಲ್ಲಿಯೂ ಯಾರಾದರೂ ಮಾತನಾಡಲು ಸಿಗುವರು. ಕುರುಡರು ಸ್ವಾಭಾವಿಕವಾಗಿ ವಾಚಾಳಿಗಳು. ಅವರ ಕಿವಿಯು ಬಹಳ ಸೂಕ್ಷ್ಮ. ಯಾವುದೂ ಅವರನ್ನು ತಪ್ಪಿಸಿ ಹೋಗಲಾರದು.

ಯಾವುದೂ ಹೋಗಲಾರದು!

ಕಾಲಿಡುವ ಸಪ್ಪಳವೂ ಅವರನ್ನು ಮೋಸಗೊಳಿಸಲಾರದು. ಸಹಸ್ರ ಶಬ್ದಗಳ ಮಧ್ಯದಲ್ಲಿಯೂ ಕೂಡ ಅವರು ತಮಗೆ ಬೇಕಾದ ಶಬ್ದವನ್ನು ಹೆಕ್ಕಿಕೊಳ್ಳಬಲ್ಲರು. ಮೀನನ್ನು ಹಿಡಿಯಲು ಹರಡಿದ ಬಲೆಯಂತೆ ಸರ್ವದಾ ಅವರ ಕಿವಿಯು ಸೂಕ್ಷ್ಮವಾಗಿದೆ.

ಆದರೆ ನಗರಗಳಲ್ಲಿ ಕುರುಡರು ಸುಮ್ಮನೆ ಕುಳಿತುಕೊಳ್ಳುವರು. ಗೊಂಬೆಗಳಂತೆ ನಿಶ್ಚಲವಾಗಿ ಕುಳಿತುಕೊಳ್ಳುವರು. ಸುಖವಿಲ್ಲದೆ, ಸಂತೋಷವಿಲ್ಲದೆ, ಶಾಂತಿಯಿಲ್ಲದೆ, ನೀರವವಾಗಿ ಕುಳಿತುಕೊಳ್ಳುವರು. ನಗರಗಳಲ್ಲಿ ಹಕ್ಕಿಗಳ ಕಲರವವಿಲ್ಲ; ಕೋಗಿಲೆಯ ಕೂಜನವಿಲ್ಲ; ಆಟಿಯ ಹಾಡುಗಳಿಲ್ಲ; ನದಿಯ ನಿನದವಿಲ್ಲ; ಆನಂದದಾಯಕವಾದ ವಸಂತದ ತಂಗಾಳಿಯಿಲ್ಲ; ಕುರುಡರಿಗೆ ಸುಖಮಯವಾದುದು ಯಾವುದೂ ಇಲ್ಲ!

ನೇಮಿಚಂದ್ರನಿಗೆ ಇದು ತಿಳಿಯದಿರಲಿಲ್ಲ. ಆದರೂ ಅವನು ಹಳ್ಳಿಗೆ ಹೋಗಿ ವಾಸಮಾಡಲು ಇಚ್ಛಿಸಲಿಲ್ಲ. ಇಷ್ಟವಿದ್ದರೆ ಹಳ್ಳಿಗೆ ಹೋಗಿ ತಂಗಿಯೊಡನೆ ಇರಬಹುದಾಗಿತ್ತು. ಆದರೆ ನೇಮಿಚಂದ್ರನು ಸುಖಸಂತೋಷಗಳನ್ನು ಎಂದೋ ತ್ಯಾಗಮಾಡಿಬಿಟ್ಟಿದ್ದಾನೆ. ಅವನಿಗೆ ಇನ್ನೆಲ್ಲಿಯ ಆನಂದ?

ಅಂಧನಾದ ನೇಮಿಚಂದ್ರನು ಮಾರ್ಗದ ಬಳಿಯಲ್ಲಿಯೇ ಹಗಲಿರುಳು ಬಿದ್ದುಕೊಂಡಿರುವನು. ಅವನಿಗೆ ದಿನವು ಇತರರಿಗೆ ಕಂಡಂತೆ ಉದ್ದವಾಗಿ ಕಾಣುವುದಿಲ್ಲ. ಹತ್ತು ವರ್ಷಗಳಿಂದ ಒಂದು ಸ್ವರಕ್ಕಾಗಿ—ಒಂದು ಕಾಲಿನ ಸಪ್ಪಳಕ್ಕಾಗಿ—ಕಾದು ಕುಳಿತುಕೊಂಡಿರುವಾಗ, ಇಪ್ಪತ್ತನಾಲ್ಕು ಗಂಟೆಗಳು ಅಷ್ಟೊಂದು ದೀರ್ಘವಾಗಿ ತೋರಲಾರವು!

ಈಗಲೂ ನೇಮಿಚಂದ್ರನು ಮೊದಲಿನಂತೆಯೇ ಜೀವನ ನಡಿಸುತ್ತಿದ್ದನು. ಈಗಲೂ ಮೊದಲಿನಂತೆಯೇ ದನಕರುಗಳನ್ನು ಮಾಡಿ, ಮಾರ್ಗದ ಬದಿಯಲ್ಲಿಟ್ಟು ಅವುಗಳನ್ನು ಮಾರುತ್ತಿರುವನು. ಈಗಲೂ ಮೊದಲಿನಂತೆಯೇ ಹುಡುಗರೂ ಹೊಸಬರೂ ಬಂದು, ಅವುಗಳನ್ನು ಕೊಂಡುಕೊಳ್ಳುತ್ತಿರುವರು. ಆದರೆ ಇಂದಿನ ನೇಮಿಚಂದ್ರನು ಅಂದಿನ ನೇಮಿಚಂದ್ರನಲ್ಲ. ಮೊದಲಿನ ನೇಮಿಚಂದ್ರನಿಗೆ ದುಃಖವೇನೆಂಬುದರ ಅರಿವಿರಲಿಲ್ಲ. ಪ್ರಪಂಚದಲ್ಲಿ ಯಾವುದಕ್ಕೂ ಗಣನೆಮಾಡದೆ ಹಕ್ಕಿಯಂತೆ ಸುಖಿಯಾಗಿದ್ದನು. ಅದೇ

ನೇಮಿಚಂದ್ರನು ಈಗ ಪರಮದುಃಖಿ; ಯಾವಾಗಲೂ ಯೋಚನಾಪರವಾದ ಮುಖ. ಅವನ ಭಾವನೆಗಳೇನೆಂಬುದನ್ನು ಗ್ರಹಿಸಲು ತೀರ ಅಸಾಧ್ಯ. ಕಣ್ಣುಗಳಲ್ಲಿ ಕಟಾಕ್ಷವಿಲ್ಲದಿದ್ದುದರಿಂದ ಮುಖದ ಮೇಲೊಂದು ಪರದೆಯನ್ನೆಳೆದು ಬಿಟ್ಟಂತೆ ತೋರುತಲಿತ್ತು.

ಹೌದು. ನೇಮಿಚಂದ್ರನ ಕೃತಿಗಳೀಗ ಮೊದಲಿನವುಗಳಿಗಿಂತಲೂ ರಮಣೀಯವಾಗಿವೆ. ಅವನ ಬೆರಳುಗಳಿಗೆ ಅದ್ಭುತವಾದ ಕೌಶಲವಿದೆ. ಚಪಲವಾದ ಅವೇ ಬೆರಳುಗಳು ಮಾಡಿದ ಇತರ ಕೃತಿಗಳು ಬಳಿಯಲ್ಲಿದ್ದ ಚೀಲದೊಳಗೆ ಅಡಗಿ ಕುಳಿತಿವೆ. ಅವನ್ನು ಆತನು ಯಾರಿಗೂ ತೋರಿಸನು.

'ಅಣ್ಣಾ, ನಿನ್ನ ಬಳಿಯಲ್ಲಿ ಇನ್ನೇನಿದೆ ನೋಡೋಣ. ಚೀಲವನ್ನು ಬಿಚ್ಚು. ಈ ದನಕರುಗಳು ಬರೇ ಹುಡುಗರ ಗೊಂಬೆಗಳಲ್ಲ; ಕಲೆಯ ನಿಧಿ.'

ಅಸಮಾಧಾನಸೂಚಕವಾಗಿ ನೇಮಿಚಂದ್ರನು ತಲೆದೂಗಿದನು. ಸ್ವರವೇನೋ ಸುಸ್ವರ; ಕರ್ಕಶವಾಗಿರದೆ ಕೇಳಲು ಮಧುರವಾಗಿತ್ತು. ಆದರೆ ಆಗಂತುಕನಿಗೆ ತನ್ನ ಸ್ವಂತ ವಿಚಾರಗಳನ್ನು ಬಯಲಿಗೆಳೆಯುವಷ್ಟು ಕುತೂಹಲವೇಕೆ?

ಕುರುಡನ ಮೌನದ ಉತ್ತರವನ್ನು ನೋಡಿ, ಆಗಂತುಕನು ಅಪ್ರತಿಭನಾದನು. ಆದರೆ ಆತನು ಮತ್ತೊಮ್ಮೆ ಅವನ ಬಳಿಗೆ ಬಂದು, ಪ್ರೀತಿವ್ಯಂಜಕ ಸ್ವರದಿಂದ, 'ನಾನೂ ನಿನ್ನಂತೆಯೇ ಒಬ್ಬ ಶಿಲ್ಪಿ. ಇಲ್ಲಿಯವನಲ್ಲ — ಬಹಳ ದೂರದಿಂದ ಬಂದಿರುತ್ತೇನೆ. ನನಗೂ ಇದೇ ವೃತ್ತಿಯಿಂದ ಜೀವನ ಹೋಗಬೇಕಾಗಿದೆ. ನಿನ್ನ ಉತ್ತಮವಾದ ಕೃತಿಗಳನ್ನು ತೋರಿಸಲಾರೆಯಾ ತಮ್ಮಾ?' ಎಂದನು.

ನೇಮಿಚಂದ್ರನು ಆಗಂತುಕನ ಪ್ರೇಮವ್ಯಂಜಕ ಸ್ವರವನ್ನು ಕೇಳಿ ತುಸು ಯೋಚಿಸಿದನು. ಮುಖವನ್ನು ಮೇಲೆತ್ತಿ, ತನ್ನೆರಡು ಕುರುಡು ಕಣ್ಣುಗಳಿಂದ ಆ ಹೊಸಬನ ಮುಖವನ್ನು ದಿಟ್ಟಿಸಿ ನೋಡುತ್ತಾ ಕುರುಡರಿಗಿದ್ದ ಆ ಮತ್ತೊಂದು ಕಣ್ಣಿನಿಂದ, ಆಗಂತುಕನ ಯಾವುದಾದರೊಂದು — ನೋಡಿಯುನ್ನಾಗಲಿ-ಕೈ-ಕೈಯುನ್ನಾಗಲಿ ಮಾಡಿ, ತನ್ನಂತೆಯೇ ಪುಳಕಿತನಾಗಬಲ್ಲನೆಂದು ಊಹಿಸಿದನು.

ಹೊಸಬನನ್ನು ನಿಂತಿರುವಂತೆ ಕೈಸನ್ನೆ ಮಾಡಿ ತಿಳಿಸಿ, ಮಾರ್ಗದಲ್ಲಿ ಪದಶಬ್ದಗಳು ನಿಂತಾಗಲೊಮ್ಮೆ, ನೇಮಿಚಂದ್ರನು ಚೀಲವನ್ನು ಬಿಚ್ಚಿ ಅದ ರೊಳಗಿದ್ದುದನ್ನು ತೋರಿಸಿದನು.

ಆಶ್ಚರ್ಯದ ಮೇಲೆ ಆಶ್ಚರ್ಯ! ಒಪ್ಪೆ ಚಿಂದಿ ಬಟ್ಟೆಯಲ್ಲಿ ಸುತ್ತಿಟ್ಟ ಒಬ್ಬ ಮನುಷ್ಯನ ರುಂಡದ ಆಕೃತಿ! ಮತ್ತೊಂದು ಬಟ್ಟೆಯಲ್ಲಿ, ಮುಷ್ಟಿ ಯಲ್ಲೊಂದು ಚೂರಿಯನ್ನು ಗಟ್ಟಿಯಾಗಿ ಹಿಡಿದುಕೊಂಡಿದ್ದ ಇನ್ನೊಂದು ಮಣ್ಣಿನ ಗೊಂಬೆ!! ಆಗಂತುಕನು ಆಶ್ಚರ್ಯದಿಂದ ಆ ಮಣ್ಣಿನ ಮೋರೆ ಯನ್ನು ನೋಡಲಾರಂಭಿಸಿದನು. ಭಯವೂ ಕ್ರೋಧವೂ ಆ ಮೋರೆಯ ತುಟಿಯಲ್ಲೂ ಕಣ್ಣುಗಳಲ್ಲೂ ಮೂರ್ತಿಮತ್ತಾಗಿ ಪ್ರಕಟವಾಗಿದ್ದುವು. ಕೆಂಡ ಗಳಂತೆ ಜ್ವಲಿಸುತಿದ್ದ ಕಣ್ಣುಗಳು ಕೆಳಗೆ ಏನನ್ನೋ ನೋಡುತಿದ್ದವು. ಮುಖವು ಕ್ರೂರವಾದ ಮುಖ; ಹುಬ್ಬುಗಳಿಲ್ಲದ ಮುಖ; ಹಣೆ ಕಿರಿದಾದ, ಒಂದೇ ಕಿವಿಯ ಮುಖ! ನಿಮಿಷ ಮಾತ್ರದಲ್ಲಿ ಕೈಯಲ್ಲಿ ಹಿರಿದಿದ್ದ ಆ ಭಯಂಕರವಾದ ಚೂರಿಯ ಅರ್ಥವು ಆಗಂತುಕನಿಗೆ ಹೊಳೆಯಿತು.

ಅಂಧರ ಶ್ರವಣಶಕ್ತಿಯು ಅಸಾಧಾರಣವಾಗಿ ತೀಕ್ಷ್ಣವಾಗಿದೆ. ಜನ ರಾರೋ ನಡೆದುಬರುವ ಶಬ್ದವನ್ನು ಕೇಳಿ ನೇಮಿಚಂದ್ರನು ಚೀಲವನ್ನು ಮೊದಲಿನಂತೆಯೇ ಬೇಗಬೇಗನೆ ಮುಚ್ಚಿಟ್ಟನು. ಆಗಂತುಕನು 'ರಾಮ ರಾಮ! ನೀನು ನಿಜವಾದ ಶಿಲ್ಪಿಯೇ ಸರಿ. ಆದರೆ ಆ ಮೋರೆಗೆ ಒಂದೇ ಕಿವಿಯೇಕೆ?' ಎಂದನು.

'ಅವನೇ ನಾನು ಕಂಡ ಕಡೆಯ ಮನುಷ್ಯ. ದೇವರು ಅವನನ್ನು ಹಾಗೆಯೇ ಸೃಷ್ಟಿಸಿದ್ದನು.'

'ಕೈ ಬೆರಳೂ ಮುರಿದಿದ್ದಿತೇನು?'

'ಹೌದು.'

ನೇಮಿಚಂದ್ರನ ಮುಖವು ಆಕಾಶದ ಕಡೆಗೆ ತಿರುಗಿತ್ತು. ಅವನು ಏನನ್ನೋ ಯೋಚಿಸುತಿದ್ದನು. ಮೊದಲಿನ— ಹತ್ತು ವರ್ಷಗಳ ಮೊದಲಿನ— ದೃಶ್ಯವೊಂದು ಅವನ ಕಣ್ಣ ಮುಂದೆ ಕಟ್ಟಿದಂತಾಗುತಿತ್ತು.

ಆ ಮಣ್ಣಿನ ಮುಖ! ಎಂತಹ ಕ್ರೂರವಾದ ಮಾಸವನ ಮೋರೆ! ಆಗಂತುಕನ ಸರ್ವ ಶರೀರವೂ ರೋಮಾಂಚಿತವಾಯಿತು. ಅಂದಿನ ದೃಶ್ಯವು ಅಸ್ಪಷ್ಟವಾಗಿ ಅವನ ಕಣ್ಣೆದುರಿಗೂ ಹಾದು ಹೋದಂತಾಯಿತು. ಪ್ರಶ್ನೆಯೊಂದು ನಿಮಿಷ ನಿಮಿಷಕ್ಕೂ ಅವನ ಬಾಯಿಗೆ ಬರುತಲಿತ್ತು. ಉತ್ತರವನ್ನು ತಿಳಿದಿದ್ದರೂ ಪ್ರಶ್ನೆಯನ್ನು ಕೇಳಬೇಕೆ?

ಆದರೂ ಆಗಂತುಕನು ಕುರುಡನ ಕಿವಿಯ ಬಳಿಯಲ್ಲಿ ಮುಖವನ್ನಿಟ್ಟು ನಡುಗುವ ದನಿಯಿಂದ 'ಅಣ್ಣಾ, ಅದರ ಕೈಯಲ್ಲಿ ಚೂರಿಯೇಕಣ್ಣಾ?' ಎಂದು ಕೇಳಿಬಿಟ್ಟನು.

ಮೊದಲಿನಂತೆಯೇ ನೇಮಿಚಂದ್ರನ ಮೋರೆಯು ಬಾನಿನ ಕಡೆಗೆ ತಿರಿಗಿತ್ತು. ಅವನು ಮೋರೆಯನ್ನು ರವಷ್ಟಾದರೂ ತಿರುಗಿಸದೆ, ಮೊದಲಿನ ಸ್ವರದಲ್ಲೆ, ಮೊದಲಿನಂತೆಯೇ ಉತ್ತರವಿತ್ತನು:

'ಆ ಚೂರಿಯೇ ನನ್ನ ಕಣ್ಣುಗಳನ್ನು ಕುಕ್ಕಿ ತೆಗೆದ ಬ್ರಹ್ಮಾಸ್ತ್ರ.'

೨.

ಆಗಂತುಕನ ಹೆಸರು ಶಠಗೋಪ. ಮೈಸೂರಿನ ಕಲಾಶಾಲೆಯೊಂದರ ಅಧ್ಯಾಪಕನಾಗಿದ್ದು, ಕಲಾನ್ವೇಷಣೆಗಾಗಿ ದಕ್ಷಿಣ ಕನ್ನಡಕ್ಕೆ ಬಂದಿದ್ದ ಕಲಾ ವಿದ್ಯಾರ್ಥಿ. ಕಾರ್ಕಳ, ಮೂಡಬಿದರೆ, ಬಾರಕೂರುಗಳನ್ನು ನೋಡಿ ಅಲ್ಲಿಯ ಶಿಲ್ಪಿಗಳ ಮಾದರಿಯನ್ನು ತಿಳಿದುಕೊಂಡು, ಹಿಂದೆ ಹೊರಟು ಹೋಗಬೇಕೆನ್ನುವಷ್ಟರಲ್ಲಿ ಶಠಗೋಪನಿಗೆ ಅಕಸ್ಮಾತ್ತಾಗಿ ನೇಮಿಚಂದ್ರನ ದರ್ಶನವಾಯಿತು. ಅಂದೇ ಹೊರಟು ಹೋಗಬೇಕೆಂದಿದ್ದ ಅವನಿಗೆ ಇನ್ನು ನಾಲ್ಕೈದು ದಿನ ಉಳಿದುಕೊಂಡರಾಗಬಹುದೆಂಬ ಇಚ್ಛೆಯುಂಟಾಯಿತು. ಅದುಮೊದಲು ಶಠಗೋಪನು ನೇಮಿಯ ಗುಡಿಸಲಿಗೆ ಅನೇಕ ವೇಳೆ ದರ್ಶನವಿತ್ತನು. ಬರಬರುತ್ತ ನೇಮಿಚಂದ್ರನೂ ಅವನೂ ಅತ್ಯಂತ ಗೆಳೆಯರಾದರು. ಶಠಗೋಪನಿಗೆ ನೇಮಿಯ ಗುಡಿಸಲಿನಲ್ಲಿ ಕುಳಿತಾಗ ಆದಷ್ಟು ಆನಂದವು ಬೇರೆಲ್ಲೂ ಆಗುತಿರಲಿಲ್ಲ. ನೇಮಿಚಂದ್ರನ ಗುಡಿಸಲಿನಲ್ಲಿ ಲೆಕ್ಕವಿಲ್ಲದಷ್ಟು ಮಣ್ಣಿನ ರುಂಡಗಳೂ ಚೂರಿಯನ್ನು ಹಿಡಿದಿದ್ದ ಕೈಗಳೂ ಬಿದ್ದುಕೊಂಡಿದ್ದವು. ಕೆಲವು ಒದ್ದೆಬಟ್ಟೆಯಲ್ಲಿ ಸುತ್ತಿಡಲ್ಪಟ್ಟಿದ್ದುವು;

ಕೆಲವು ಒಣಗಿ ಒಡೆದು ಹೋಗಿದ್ದವು. ಆದರೆ ಯಾವುದೂ ಶಠಗೋಪನು ಮೊದಲು ನೋಡಿದ ರುಂಡದಷ್ಟು ನಾಜೂಕಾಗಿರಲಿಲ್ಲ.

ಬೀಟಿನ ಪೋಲಿಸಿನವನೊಬ್ಬನು ಶಠಗೋಪನೊಡನೆ,'ಯಾರು ಸ್ವಾಮಿ? ನೇಮಿಯೋ? ಪಾಪ! ಸ್ವಲ್ಪ ತಲೆ ಹಾಳಾಗಿದೆ. ಅನೇಕ ವರ್ಷಗಳ ಮೊದಲೂ ಹೀಗೆಯೇ ರುಂಡಗಳನ್ನೂ ಕೈಗಳನ್ನೂ ಮಾಡುತಿದ್ದನಂತೆ. ಇದೇ ಮಾರ್ಗದಲ್ಲಿ ಬೀಟಿಗಿದ್ದ ಪೋಲಿಸಿನವರು ಹೇಳುತಿದ್ದರು. ಆಗಾಗ್ಗೆ ನಾನು ಹೋಗಿ ಅವುಗಳನ್ನು ಹುಗಿದಿಟ್ಟು ಬರುತ್ತೇನೆ ಸ್ವಾಮೀ. ರುಂಡ ನೋಡಿದರೆ ಮೈ 'ಜುಂ' ಎನ್ನುತ್ತೆ. ಅವನು ನಿದ್ದೆ ಮಾಡುವುದೇ ಇಲ್ಲ ವಂತೆ! ದಿನಂಪ್ರತಿಯೂ ರಾತ್ರಿ ಎದ್ದು, ರುಂಡಗಳಿಗೆ ಸುತ್ತಿದ್ದ ಚಿಂದಿ ಬಟ್ಟೆ ಗಳನ್ನೆಲ್ಲಾ ಒದ್ದೆ ಮಾಡುವನಂತೆ!—ಅವನ ತಾಯಿಯೇ ಹೇಳಿದ್ದು ಸ್ವಾಮೀ........ಈ ಮಾರ್ಗದಲ್ಲೊಮ್ಮೆ ಬೆಂಕಿ ಬಿದ್ದಾಗ ಅವನು ಮಾಡು ತಿದ್ದುದನ್ನು ನೋಡಬೇಕಿತ್ತು! ಬೆಂಕಿ ಅಷ್ಟೊಂದು ಭಯಂಕರವಾಗಿರಲಿಲ್ಲ. ಆದರೂ ಮನೆಯ ಈಚೆ ಮೂಲೆಯಿಂದ ಆಚೆ ಮೂಲೆಗೆ, ಆಚೆ ಮೂಲೆ ಯಿಂದ ಈಚೆ ಮೂಲೆಗೆ ಬಿದ್ದುಕೊಂಡು, ಎದ್ದುಕೊಂಡು, ಓಡುತ್ತ ಆ ರುಂಡಗಳನ್ನು ಕಾಪಾಡುತಿದ್ದ! ನಮಗೆಲ್ಲಾ ಪಾಪ ಕಾಣಿಸುತಿತ್ತು.... ಪೋಕರಿ ಹುಡುಗರು ನಗುತಿದ್ದರು. ಉಂಟಾ?....

'ಕುರುಡರು ಕೂಗೋದನ್ನು ನೋಡಿದ್ದೀರಾ ಸಾರ್? ಇಲ್ಲವೆ? ಬಹಳ ಭಯಂಕರ, ಬಹಳ ಭಯಂಕರ! ಎಂತವನಿಗಾದರೂ ಕರುಣೆ ಹುಟ್ಟೀತು. ಬೆಂಕಿ ನಂದಿದ ಮೇಲೂ ಭಾರೀ ಕೂಗುತಿದ್ದ. ಹೇಳಿದೆನಲ್ಲ, ನೋಡುವಾಗ ಎಂತವನಿಗಾದರೂ ದುಃಖ ಬರುತ್ತೆ. ಮತ್ತೆ ನಾನು ಹೋಗಿ ಸಮಾಧಾನ ಮಾಡಿದೆ. ಯಾವಾಗಲೂ ನನ್ನ ಮಾತು ಸ್ವಲ್ಪ ಕೇಳುತ್ತಾನೆ. ಪಾಪ! ನಾನೂ ಅವನ ಊರಿನವನು ಸ್ವಾಮೀ. ಮೂಡುಬಿದ್ರೆ ವಿಷಯ ಮಾತ ನಾಡುವಾಗ ನೇಮಿಯನ್ನು ಕುರುಡಾಂತ ಯಾರೂ ಹೇಳಲಿಕ್ಕಿಲ್ಲ. ಊರು ಬಿಟ್ಟು ಬರುವಾಗ ಕಣ್ಣಿತ್ತು—ಹತ್ತು ವರ್ಷಗಳ ಹಿಂದೆ' ಎಂದನು.

'ಪಳ್ಳಿಗೆ ಯಾಕೆ ಹೋಗಿಲ್ಲ? ಹೋಗಬಹುದಿತ್ತಲ್ಲ?'

'ಹೌದು ಸ್ವಾಮೀ, ಹೋಗಬಹುದಿತ್ತು. ನಾನೂ ಎಷ್ಟೋ ಹೇಳಿ ನೋಡಿದೆ. ಆದರೆ ನೇಮಿ ಕೇಳುವುದಿಲ್ಲ. ತನ್ನಿಚ್ಛೆ ಮುದ್ದೆ!'

ಶಠಗೋಪನು ಪೋಲೀಸಿನವನನ್ನು ಬಿಟ್ಟು ನೇಮಿಚಂದ್ರನ ಗುಡಿಸಲಿನ ಕಡೆಗೆ ತಿರುಗಿದನು. ಕುರುಡನ ದುಃಖಮಯವಾದ ಜೀವನವನ್ನು ಸುಖ ಮಯವಾಗಿ ಮಾಡಲು ಸಾಧ್ಯವೇ ಎಂಬುದನ್ನೇ ಯೋಚಿಸುತ್ತಾ ಶಠ ಗೋಪನು ಮನೆಯನ್ನು ಹೊಕ್ಕನು.

ಕುಳಿತುಕೊಂಡ ಬಳಿಕ, 'ನೇಮಿಚಂದ್ರ, ನೀನು ರುಂಡಗಳನ್ನೂ, ಕೈಗಳನ್ನೂ ಮಾಡುತಿರುವುದು ಆ ಮನುಷ್ಯನ ಚಿತ್ರವು ನಿನ್ನ ಮನಸ್ಸಿನಿಂದ ಅಳಿಸಿಹೋಗದಂತಲ್ಲವೆ? ಅಲ್ಲವೆ ತಮ್ಮಾ?' ಎಂದು ಕೇಳಿದನು.

'ಅದು ನಿಜ, ಶಠಗೋಪ. ಕೊಲೆಪಾತಕಿಯು ಬಂದಾಗ ಗುರುತಿಲ್ಲದೆ ಅವನನ್ನು ಕಳೆದುಕೊಳ್ಳಬೇಕೆನ್ನುವಿಯಾ?'

'ಕೊಲೆಪಾತಕಿ?'

'ನಿನಗೆ ನನ್ನ ಜೀವನಕಥೆಯು ತಿಳಿದಿಲ್ಲ. ಹೇಳುವೆನು ಕೇಳು. ಆ ಮನುಷ್ಯನೇ ನಮ್ಮ ವಂಶವನ್ನು ನಿರ್ಮೂಲ ಮಾಡಿದವನು. ಅವನು ನನ್ನ ಅಣ್ಣನನ್ನು ಕೊಲ್ಲುವುದನ್ನು ಇವೇ ಕಣ್ಣುಗಳಿಂದ ನೋಡಿದ್ದೇನೆ. ಆಗ ನಾನು ನಿದ್ರಿಸುತಿದ್ದೆ, ಸ್ವಪ್ನರಾಜ್ಯದಲ್ಲಿ ಸಮ್ರಾಟನಾಗಿಬಿಟ್ಟಿದ್ದೆ! ಏನೊ ಫಕ್ಕನೆ ಎಚ್ಚೆತ್ತೆ, ನೋಡುತ್ತೇನೆ! ನನ್ನ ಅಣ್ಣನು ಸತ್ತುಬಿದ್ದಿದ್ದಾನೆ; ಕೊಲೆ ಯಾಗಿ ಬಿದ್ದಿದ್ದಾನೆ! ನಾನು ಪೂರಾ ಜಾಗ್ರತಾವಸ್ಥೆಯಲ್ಲಿದ್ದಿಲ್ಲ. ಆದರೂ ಆ ದೃಶ್ಯವು ಹತ್ತು ವರ್ಷಗಳ ಬಳಿಕ ಈಗಲೂ ನೆನಪಿದೆ. ಅಣ್ಣನು ಪೂರಾ ಸತ್ತಿದ್ದನಾದರೂ ಆ ಕೇಡಿಗನು, ಒಮ್ಮೆಯಲ್ಲ, ಎರಡು ಬಾರಿಯಲ್ಲ, ಮೂರು ಬಾರಿ ಚೂರಿಯಿಂದ ತಿವಿದನು! ನೋಡಿ ದಿಗಿಲುಗೊಂಡೆ! ಮೊದಲು ಮೊದಲು ಏನೋ ಕೆಟ್ಟ ಸ್ವಪ್ನವಾಗಿರಬೇಕೆಂದು ಯೋಚಿಸಿದೆ. ಸ್ವಪ್ನವಲ್ಲ ವೆಂದೂ, ವಾಸ್ತವವಾದುದೆಂದೂ ಮತ್ತೆ ತಿಳಿದೆ. ತಿಳಿದಾಗ ಅಂಧನಾಗಿದ್ದೆ!'

ಶಠಗೋಪನ ಹೃದಯವು ಕರಗಿ ನೀರಾಗಿ ಹೋಯಿತು.

'ಶಠಗೋಪ, ಯೌವನದಲ್ಲಿ ದುಃಖದ ಅರಿವಿಲ್ಲ, ನೋಡು. ಎಲ್ಲವೂ ಸುಖಮಯವಾದುದೆಂದು ಭಾವಿಸುತ್ತೇವೆ. ಆಗ ನನಗೆ ದೇಶಪರ್ಯಟಣ ದಲ್ಲಿ ಬಹಳ ಹುಚ್ಚು. ನಿಮ್ಮೂರ ಕಡೆಗೂ ಬಂದಿದ್ದೆ. ಸುತ್ತಾಟದಲ್ಲೊಮ್ಮೆ ಅಣ್ಣನ ಮನೆಗೂ ಬಂದೆ. ಎರಡು ದಿನವಿದ್ದು ಹೋಗಬೇಕೆಂದು ಹಠ

ಹಿಡಿದ; ಒಪ್ಪಿ ಉಳಿದುಕೊಂಡೆ. ಹೆಂಡತಿಯನ್ನು ತವರು ಮನೆಗೆ ಕಳುಹಿಸಿದ್ದ, ಇಲ್ಲವಾದರೆ ಯಾರೋ ಒಂಟಿ ಕಿವಿಯವನೊಬ್ಬನು ಕದ್ದುಕೊಂಡು ಹೋಗುವನಂತೆ! ಕೇಳಿ ನಗೆ ಬಂತು! ಆದರೂ ಅವನಂದುದೇ ದಿಟವಾಯಿತು. ಆ ಮನುಷ್ಯನು ನಮಗೆ ಅದೇ ರಾತ್ರೆ ದರ್ಶನವಿತ್ತನು. ಹಾ, ಎಂತಹ ದರ್ಶನ! ಒಬ್ಬನು ಪ್ರಾಣವನ್ನು ಕಳೆದುಕೊಂಡನು! ಇನ್ನೊಬ್ಬನು ತುಂಬಿದ ಯೌವನದಲ್ಲಿ ಕಣ್ಣುಗಳನ್ನು ಕೀಳಿಸಿಕೊಂಡು ಮರಣ ಪರ್ಯಂತ ಕುರುಡನಾದನು!'

ದುಃಖಾತಿರೇಕದಿಂದ ಶಠಗೋಪನ ನಯನಗಳಲ್ಲಿ ಕಣ್ಣೀರು ತೊಟ್ಟಿಕ್ಕಿತು. ಆದರೂ ನೇಮಿಚಂದ್ರನು ಒಂದು ಬೊಟ್ಟು ಕಣ್ಣೀರು ಸುರಿಸಲೊಲ್ಲ! ಹತ್ತು ವರ್ಷಗಳ ವರೆಗೆ ಅದೇ ದೃಶ್ಯವನ್ನು ಯೋಚಿಸಿ, ಯೋಚಿಸಿ, ಅವನ ಹೃದಯವು ಪಾಷಾಣದಂತೆ ಕಠಿಣವಾಗಿ ಹೋಗಿತ್ತು.

ಶಠಗೋಪನು ಕುರುಡನ ಬೆನ್ನು ತಟ್ಟುತ್ತಾ, 'ಅಣ್ಣಾ, ನನ್ನೊಂದಿಗೆ ನಮ್ಮೂರಿಗೆ ಬರುವೆಯಾ? ಅಲ್ಲಿ ನಿನ್ನನ್ನು ಎಲ್ಲರೂ ಮರ್ಯಾದೆಯಿಂದ ಕಾಣುವರು. ಇಲ್ಲಿ ಬೀದಿಯಲ್ಲಿ ಬಿದ್ದಿರಲೇಕೆ?' ಎಂದು ಕೇಳಿದನು.

ಅಂಧನು ಹೆಚ್ಚು ಹೊತ್ತು ಗುಡಿಸಲಿನ ಗೋಡೆಯನ್ನೇ ದಿಟ್ಟಿಸಿ ನೋಡುತಿದ್ದನು. ಏತರ ವಿಷಯವಾಗಿಯೋ ಯೋಚಿಸುತಿದ್ದಂತೆ ಭಾಸವಾಗುತಲಿತ್ತು.

'ಶಠಗೋಪ, ನಿನ್ನೊಂದಿಗೆ ಬರಲಾರೆ. ಬೇಕಾದರೆ ಹಳ್ಳಿಗೆ ಹೋಗಿ ಸುಖದಿಂದಿರುತಿದ್ದೆ. ತಂಗಿಯು ಕರೆದಳು. ಆದರೂ ಹೋಗಲಿಲ್ಲ. ಇಲ್ಲಿಗಾದರೆ ಅವನು ಬರುವ ಸಂಭವವಿದೆ. ಆದರೆ ನಿಮ್ಮೂರಿಗೆ, ಅಷ್ಟು ದೂರ ಬರುವನೇಕೆ? ಬರುವ ಸಂಭವವಿದೆಯೇ? ಅದಕ್ಕಾಗಿಯೇ ಇಲ್ಲಿ ಅವನಿಗಾಗಿ ಕುಳಿತಿದ್ದೇನೆ! ಯಾರು ನನ್ನ ಅಣ್ಣನನ್ನು ಕೊಂದು ನನ್ನ ಕಣ್ಣನ್ನು ಕುಕ್ಕಿತೆಗೆದನೋ ಆ ಕೊಲೆಪಾತಕಿಗಾಗಿ ಅಹೋರಾತ್ರಿ ಕಣ್ಣುಬಿಟ್ಟು ಕುಳಿತಿದ್ದೇನೆ! ಆ ಒಂದು ಸ್ವರಕ್ಕಾಗಿ ಸದಾ ಎಚ್ಚರದಿಂದ ಕಾದು ಕುಳಿತಿದ್ದೇನೆ!'

'ಸ್ವರ! ಯಾರ ಸ್ವರ? ಹಾಗಾದರೆ ಅವನು ನಿನ್ನೊಡನೆ ಮಾತನಾಡಿದ್ದನೇ?'

'ಕೇಳು. ನಾನು ಎಚ್ಚರವಾಗಿದ್ದುದನ್ನು ಕಂಡು ಬಹು ಸಮಯದ ವರೆಗೆ ಆಶ್ಚರ್ಯಗೊಂಡ ವ್ಯಾಘ್ರದಂತೆ ನನ್ನನ್ನೇ ದುರದುರನೆ ದಿಟ್ಟಿಸಿ ನೋಡಿದನು. ಬಳಿಕ ಲಾಂದ್ರವನ್ನೆತ್ತಿಕೊಂಡು ಮೆಲ್ಲಮೆಲ್ಲನೆ ಬೇಟೆಯ ಮೇಲೆ ಹಾರಲಿರುವ ಹುಲಿಯಂತೆ ಸದ್ದುಮಾಡದೆ ನನ್ನ ಬಳಿಗೆ ಬಂದನು. ಇದನ್ನೆಲ್ಲಾ ನಾನು ಸೋಜಿಗದಿಂದ ನೋಡಿದೆ; ನೋಡಿ ಎದ್ದು ಕುಳಿತುಕೊಳ್ಳಲು ಯತ್ನಿಸಿದೆ. ಆದರೆ ಬೇಗನೆ ಏಳಲಾರದೆ ಹೋದೆ. ಯೌವನದ ನಿದ್ದೆಯು ಬಹು ಗಾಢನಿದ್ದೆ. ಯಾರು ಹಗಲೆಲ್ಲಾ ನಗುತಲಿರುವರೋ ಅವರು ರಾತ್ರೆ ಸುಖವಾಗಿ ನಿದ್ರಿಸುವರು. ಅಂತೆಯೇ ನಾನೂ ನಿದ್ರಿಸಿದ್ದೆ. ಆದರೆ ಈಗ ನಾನು ನಗುವುದೂ ಇಲ್ಲ, ನಿದ್ರಿಸುವುದೂ ಇಲ್ಲ. ಎಲ್ಲವನ್ನೂ ತ್ಯಾಗಮಾಡಿ ಬಿಟ್ಟಿದ್ದೇನೆ.

'ಅವನು ಏನು ಹೇಳಿದನೆಂದು ಕೇಳುವೆಯಲ್ಲವೆ? ಆ ಮಾತುಗಳು ಈಗಲೂ ನನ್ನ ಹೃದಯದಿಂದ ಅಳಿಸಿಹೋಗಿಲ್ಲ. ಹತ್ತು ವರ್ಷಗಳ ನಂತರವೂ, ಅವುಗಳು ನನ್ನ ಮನಸ್ಸಿನಲ್ಲಿ ಸ್ಥಿರವಾಗಿ ನಿಂತಿವೆ. ಪ್ರತಿರಾತ್ರಿಯೂ ಆ ಭೀಕರ ಶಬ್ದಗಳೇ ನನ್ನನ್ನು ನಿದ್ರೆಯಿಂದ ಎಚ್ಚರಿಸುವವು. ಆಗಲೇ ನಾನು ಎದ್ದು, ಚಿಂದಿ ಬಟ್ಟೆಗಳನ್ನು ಒದ್ದೆಮಾಡಿ, ಅವುಗಳಲ್ಲಿ ಆ ರುಂಡಗಳನ್ನು ಸುತ್ತಿಡುವೆನು.

'ಕೇಳು ಶಠಗೋಪ! ಆ ರಾಕ್ಷಸನು ದೀಪವನ್ನು ದೂರದಲ್ಲಿಟ್ಟು ನನ್ನ ಬಳಿಗೆ ಬಂದನು. ಅವನು ಏನನ್ನು ಯೋಚಿಸುತಿದ್ದನೋ ಹೇಳಲಾರೆ. ದುಷ್ಟರ ಯೋಚನೆಯನ್ನು ನಾನು ಹೇಗೆ ತಾನೆ ತಿಳಿಯಲಿ? ತಿಳಿದಾಗ ಬೆಳಗಾಗಿ ಹೋಯಿತು. ಅವನು ನನ್ನನ್ನು ನೆಲಕ್ಕೆ ಬಿಗಿಯಾಗಿ ಅದುಮಿ ಹಿಡಿದಿದ್ದ, ನಾನು ಅವನ ಕೈಗಳಲ್ಲಿ ಬರಿಯ ಮಗುವಿನಂತೆ! ನನಗೆ ಇಪ್ಪತ್ತು ವರ್ಷವಾಗಿತ್ತು ಮಾತ್ರ. ಅವನು ದೃಢಾಂಗನಾದ ಕೂಲಿಯಾಳು.

'ಆಗಲೂ ಅವನು ನನ್ನನ್ನೇ ದುರದುರನೆ ನೋಡುತಿದ್ದನು. ಇತರರಿಗೆ ಕೇಳಬಹುದೆಂಬ ಭಯದಿಂದ ಮೆಲ್ಲನೆ, ಅತಿ ಮೆಲ್ಲನೆ ಮಾತನಾಡುತಿದ್ದ. 'ಕಣ್ಣಿಲ್ಲದ ಕುರುಡ ನನ್ನನ್ನು ಗುರುತಿಸಲಾರ' ಎನ್ನುತ್ತಾ ಆ ಪಿಶಾಚಿಯು ನನ್ನ ಕಣ್ಣನ್ನು ಚೂರಿಯಿಂದ ತಿವಿದುಬಿಟ್ಟ! ಏನೋ ಬಿಂದುಬಿಂದುವಾಗಿ ನನ್ನ ತುಟಿಗಳ ಮೇಲೆ ಹರಿಯಿತು! ಅದೇನೆಂದು ತಿಳಿಯಲು ಬಹಳ ಹೊತ್ತು ಹಿಡಿಯಲಿಲ್ಲ. ರಕ್ತ!'

ನೇಮಿಚಂದ್ರನು ಸುಮ್ಮಗಾದನು. ಆದರೆ ಅವನ ಮುಖವು ಎಂದಿನಂತೆ ಆಕಾಶದ ಕಡೆಗೆ ತಿರುಗಿತ್ತು; ಏನೋ ಗಹನವಾದ ವಿಚಾರದ ಕುರಿತು ಯೋಚಿಸುತ್ತಿದ್ದಂತೆ ಕಾಣುತಿತ್ತು. ಈ ಅಂಧಶಿಲ್ಪಿಯ ಚಿಕ್ಕ ಹೃದಯದಲ್ಲಿಯ ಪ್ರತಿಯೊಂದು ಮಾತಿನಲ್ಲಿಯೂ, ಪ್ರತಿಯೊಂದು ಶಬ್ದದಲ್ಲಿಯೂ, ಪ್ರತಿಯೊಂದು ಅಕ್ಷರದಲ್ಲಿಯೂ, ಎಂತಹ ಅಪಾರವಾದ ಸುಖದುಃಖಗಳ ತರಂಗಗಳೇಳುತ್ತಿದ್ದವೋ ಹೇಳಲು ಯಾರಿಗೆ ಸಾಧ್ಯ? ಕಣ್ಣು ಕಾಣಿಸದಿದ್ದುದರಿಂದ ಉಂಟಾಗುವ ದುಃಖದ ಪ್ರಗಾಢತೆಯನ್ನು ತಿಳಿಯಲು ಯಾರಿಗೆ ಸಾಧ್ಯ? ಅಂಧರಿಗಿರುವ ರೂಪೋನ್ಮಾದವನ್ನರಿಯಲು ಯಾರಿಗೆ ಸಾಧ್ಯ?

ಶಠಗೋಪನು ಅಂಧನ ದುಃಖವನ್ನು ಸ್ವಲ್ಪ ಮಟ್ಟಿಗಾದರೂ ಶಮನ ಮಾಡುವ ಅಭಿಲಾಷೆಯಿಂದ, ಸಂಭಾಷಣೆಯನ್ನು ಮುಂದುವರಿಸುವ ಪ್ರಯತ್ನ ಮಾಡಿದನು.

'ಅಣ್ಣಾ, ಅವನು ಇಷ್ಟರೊಳಗೆ ಸತ್ತುಹೋಗಿರಲೂ ಬಹುದು. ಹಾಗಿದ್ದರೆ ನೀನು ಸುಮ್ಮನೆ ಸತ್ತವನಿಗಾಗಿ . . .'

ನೇಮಿಚಂದ್ರನ ಮುಖದಲ್ಲಿ ಕ್ಷೀಣವಾದ ನಗುವಿನ ಸುಳಿವು ತೋರಿತು. ಆದರೆ ಆ ನಗುವು ಮನಸ್ಸಿನ ದುಃಖದಿಂದುಂಟಾದ ನಗುವೇ ಹೊರತು ಸಂತೋಷದಿಂದುಂಟಾದುದಲ್ಲ.

'ಶಠಗೋಪ! ರಾತ್ರಿಯಲ್ಲಿ ನನ್ನನ್ನು ಎಬ್ಬಿಸಲು ಬರುವ ಆ ಸ್ವರವು ಎಂದು ನಿಂತುಹೋಗುವುದೋ ಅಂದು ನನ್ನ ಕೆಲಸವು ಸಮಾಪ್ತವಾದಂತಾಯಿತು. ಸಮಾಧಿಯಲ್ಲಿರುವ ಮನುಷ್ಯನಿಗಾಗಿ ನಾನು ಇಷ್ಟೆಲ್ಲಾ ಕಷ್ಟಪಟ್ಟು ಕಾಯುತಿರುವೆನೆಂದು ಯೋಚಿಸಿದೆಯೇನು? ಪೋಲಿಸಿನವರು ಈ ಮಣ್ಣಿನ ರುಂಡಗಳನ್ನು ಕಂಡು ನಗುವರು. ಮೊದಲಿನ ಮುದುಕರು ನನ್ನ ಕತೆಯನ್ನಾದರೂ ಕೇಳುತಿದ್ದರು. ಈಗಿನ ಹುಡುಗರು ಪ್ರಯೋಜನವಿಲ್ಲ. ನನ್ನನ್ನು ಹುಚ್ಚನೆನ್ನುತ್ತಾರೆ.'

'ನೇಮಿಚಂದ್ರ, ನೀನು ಇನ್ನು ಮುಂದೆ ಮಣ್ಣಿನ ಮುಖಗಳನ್ನು ಮಾಡಿ, ದಿನಂಪ್ರತಿ ರಾತ್ರಿ ಎದ್ದು, ಅವುಗಳಿಗೆ ನೀರುಕೊಡಬೇಕಾಗಿಲ್ಲ. ಮೊನ್ನೆ ಮಾಡಿದ ರುಂಡವನ್ನು ನನಗೆ ಕೊಡು. ನಾನದನ್ನು ತೆಗೆದುಕೊಂಡು ಹೋಗಿ, ನಿನಗೆ ಕಂಚಿನದನ್ನು ಮಾಡಿ ಕಳುಹಿಸುವೆನು.'

ನೇಮಿಚಂದ್ರನ ಮುಖದಿಂದ ತರಂಗಹೀನವಾದ ನಗರದ ಶಾಂತತೆಯಂತಹ ಶಾಂತತೆಯು ಹೊರಸೂಸುತಲಿತ್ತು.

'ಅವು ನಿನಗೆ ಸಿಕ್ಕಬೇಕಾದರೆ ಒಂದೆರಡು ತಿಂಗಳಾದರೂ ಬೇಕು. ಬರುವಾಗ ಸ್ವಲ್ಪ ವಿಳಂಬವಾದರೆ, ನಾನು ನಿನ್ನನ್ನು ಮರೆತೆನೆಂದು ಯೋಚಿಸಬೇಡ, ನೇಮಿಚಂದ್ರ!'

ಮತ್ತೊಮ್ಮೆ ನೇಮಿಚಂದ್ರನ ಮೋರೆಯಲ್ಲಿ ನಗುವಿನ ಸುಳಿವು ತೋರಿತು. ಮೊದಲಿನಂತೆಯೇ ಸಂತೋಷವಿಲ್ಲದ ಅಂಧವಾದ ನಗು!

'ಶಠಗೋಪ, ಕಾದು ಕುಳಿತಿರುವುದು ನನ್ನ ಪಾಲಿನ ಅನ್ನಪಾನೀಯ ಗಳೆಂದು ನಿನಗೆ ಇನ್ನೂ ತಿಳಿದಿಲ್ಲವೇ? ಹತ್ತು ವರ್ಷಗಳ ವರೆಗೆ ಆ ಅನ್ನ ಪಾನೀಯಗಳಲ್ಲೇ ಜೀವಧಾರಣೆಯನ್ನು ಮಾಡಿಕೊಂಡಿದ್ದೇನೆ. ಇನ್ನು ನಾಲ್ಕು ತಿಂಗಳ ವರೆಗೆ ಆ ಅನ್ನನೀರನ್ನೇ ಸ್ವಲ್ಪ ಹೆಚ್ಚು ತೆಗೆದುಕೊಂಡರೆ ಸತ್ತುಹೋಗಲಾರೆ. ಅದರ ಬದಲು, ನನ್ನಂತಹ ಅಂಧನಿಗೆ ಅದರಿಂದ ಜೀವನವು ಸುಖಮಯವಾಗಬಹುದು.'

೩.

ಪೋಲೀಸಿನವರೆಲ್ಲರೂ ಅನುಭವವಿಲ್ಲದ ಯುವಕರಲ್ಲ. ಉದಾಹರಣೆಗಾಗಿ ಇನ್ಸ್ಪೆಕ್ಟರ್ ಗಂಗಾಧರರಾಯನಿದ್ದನು. ಗಂಗಾಧರರಾಯನು ನೇಮಿಚಂದ್ರನ ಕತೆಯನ್ನು ಅಕ್ಷರಶಃ ನಂಬುತಿದ್ದನು. ಗಂಗಾಧರ ರಾಯನ ತಮ್ಮನಿಗೆ ಪಶ್ಚಿಮಘಟ್ಟಗಳ ಮೇಲೆ ಭಾರೀ ತೋಟಗಳಿದ್ದವು. ಸ್ವಭಾವತಃ ಪಟ್ಟಣಪ್ರಿಯನಾದರೂ, ಅವನಿಗೊಮ್ಮೆ, ತಮ್ಮನನ್ನು ನೋಡ ಬೇಕಾಗಿದ್ದುದರಿಂದ ಘಟ್ಟ ಹತ್ತುವ ಪ್ರಸಂಗ ಒದಗಿ ಬಂತು.

ಒಂದು ದಿನ ರಾತ್ರಿ ಅಣ್ಣತಮ್ಮಂದಿರಿಬ್ಬರೂ ಕುಳಿತುಕೊಂಡು ಮಾತನಾಡುವಾಗ ಗಂಗಾಧರರಾಯನು, ಹಗಲೆಲ್ಲಾ ಮಾರ್ಗದ ಬಳಿಯಲ್ಲಿ ಕುಳಿತುಕೊಂಡು ಮಕ್ಕಳಿಗೆ ಗೊಂಬೆಗಳನ್ನು ಮಾರಿ, ರಾತ್ರಿಯಲ್ಲಿ ಭಯಂಕರ ರುಂಡಗಳನ್ನೂ ಕೈಗಳನ್ನೂ ಮಣ್ಣಿಂದ ಮಾಡಿ ಜೀವಿಸುವ ಅಂಧಶಿಲ್ಪಿಯ ಕತೆಯನ್ನು ಹೇಳಿದನು. ಇದನ್ನು ಕೇಳಿ ರಾಮಚಂದ್ರರಾಯನು ಆಶ್ಚರ್ಯ ದಿಂದಲೂ ಕುತೂಹಲದಿಂದಲೂ 'ಅದು ಎಂತಾ ಕೈ ಅಣ್ಣಾ' ಎಂದು ಕೇಳಿದನು.

'ಎಂಥಾ ಕೈಯೆಂದರೆ? ಕೈ—'

'ನಡುವಿನ ಬೆರಳು—'

'ಎರಡನೆಯ ಗಂಟಿನಲ್ಲಿ ಮುರಿದ ಕೈಯೇನು?'

'ಹೌದು.'

'ಆಸಾಮಿಯನ್ನೆಲ್ಲಿ ನೋಡಿದೆ? ಆ ಒಂದು ರಾತ್ರಿಯ ಕೆಲಸಕ್ಕಾಗಿ ಹತ್ತು ವರ್ಷಗಳಿಂದ ಪೋಲಿಸಿನವರು ಅವನನ್ನು ಹುಡುಕುತಿದ್ದಾರೆ. ಇಷ್ಟರ ವರೆಗೆ ಅವರ ಕಣ್ಣಿಗೆಲ್ಲಾ ಮಣ್ಣೆರಚಿ ಕುಳಿತಿದ್ದಾನೆ.'

'ನಾನು ಮೊನ್ನೆ ರಹಿಮತೋಲಾ ಸಾಹೇಬರ ತೋಟಕ್ಕೆ ತಿರುಗಾಡಿ ಕೊಂಡು ಹೋಗಿದ್ದೆ. ಅಲ್ಲಿ ಅವನನ್ನು ನೋಡಿದೆ. ಕಂಬಳಿ ಟೋಪಿ ಯಿಂದ ತಲೆಯನ್ನೂ ಕಿವಿಗಳನ್ನೂ ಮುಚ್ಚಿಕೊಂಡಿದ್ದ. ನಾನು ನೋಡಿ ದಾಗ ಟೋಪಿ ತೆಗೆದು ತಲೆ ತುರಿಸುತಿದ್ದ. ದೊಡ್ಡ ರಾಕ್ಷಸನ ಹಾಗೆ ಇದ್ದಾನೆ. ಆಗ ನೋಡಿದೆ ಅವನ ಬೆರಳನ್ನು—ತಲೆ ತುರಿಸುತಿದ್ದಾಗ. ನನ್ನನ್ನು ನೋಡಿದ್ದೇ ತಡ, ಬೇಗಬೇಗನೆ ಟೋಪಿಯನ್ನು ಹಾಕಿಕೊಂಡ.'

'ನಾಳೆ ರಹಿಮತೋಲಾರ ತೋಟಕ್ಕೆ ಹೋಗೋಣ. ಭಗವಂತನು ಕೊಲೆಪಾತಕಿಗಳನ್ನು ಹೀಗೆಯೇ ಬಿಟ್ಟಾನೆ? ಅದೂ, ಆ ಕುರುಡನು ಹಗಲು ರಾತ್ರಿ ಅವನ ಉತ್ಸವವನ್ನು ಆಚರಿಸುತ್ತಿರುವಾಗ.'

* * * * * *

'ನಿನ್ನ ಒಂದು ಕಿವಿಯ ಮನುಷ್ಯನು ನಿನ್ನೊಂದಿಗೆ ಒಂದೇ ಕೋಣೆ ಯಲ್ಲಿದ್ದರೆ ಅವನ ಸ್ವರವನ್ನು ಗುರುತಿಸಬಲ್ಲೆಯಾ?' ಎಂದು ಪೋಲಿಸಿನವ ನೊಬ್ಬನು ಕೇಳಿದಂದಿನಿಂದ ನೇಮಿಚಂದ್ರನು ಮಲಗಿದುದೇ ಇಲ್ಲ.

ನೇಮಿಚಂದ್ರನಿಗೆ ಇದನ್ನು ಕೇಳಿದೊಡನೆಯೇ ದೇಹವೆಲ್ಲಾ ಒಮ್ಮೆಯೆ ಶೀತಲವಾಗಿ ನಡುಕವುಂಟಾಗಲಾರಂಭಿಸಿತು. ಬಹು ಸಮಯದ ಬಳಿಕ ಅವನು ಅಸ್ಫುಟವಾದ ಸ್ವರದಿಂದ 'ಗುರುತಿಸಬಲ್ಲೆ. ಅವನೆಂದು ಬರುವನು? ಇಂದೆ?' ಎಂದು ಕೇಳಿದನು.

* * * * * *

ಪೋಲೀಸು ಠಾಣೆಯಲ್ಲಿ ನೇಮಿಚಂದ್ರನು ಗೋಡೆಗೆ ಒರಗಿ ಕುಳಿತಿದ್ದನು. ಮುಖವು ಗೋಡೆಯ ಕಡೆಗೆ ತಿರುಗಿತ್ತು. ಕಣ್ಣುಗಳು ಗೋಡೆಯನ್ನೇ ನಿಶ್ಚಲವಾದ ದೃಷ್ಟಿಯಿಂದ ನೋಡುತಿದ್ದವು. ಹಾ! ಎಂತಹ ದೃಷ್ಟಿ! ಆ ಅಂಧನಯನಗಳ ಅಂಧದೃಷ್ಟಿಯೇ ಗೋಡೆಯನ್ನು ಒಗೆದು ಅಂತರ್ಯದಲ್ಲಿ ಅಡಗಿರುವುದನ್ನು ಹೊರಗೆಳೆಯಬಲ್ಲುದೋ ಎಂದು ತೋರುತಲಿತ್ತು. ನೇಮಿಚಂದ್ರನ ಮೋರೆಯಲ್ಲಿ ಮೊದಲಿನಂತೆಯೇ ನಗುವಿನ ಸುಳಿವಿದ್ದಿತು. ನಗುವೆಂದರೆ ನಗುವಲ್ಲ; ಸುಖದ ನಗುವಲ್ಲ; ಆನಂದದ ನಗುವಲ್ಲ. ಆ ನಗುವಿನ ಸುಳುವಿನಲ್ಲಿ ರಾಹುವಿನಿಂದ ಪೂರ್ಣಗ್ರಸ್ತನಾಗದೆ ಅಣುಮಾತ್ರ ಉಳಿದಿರುವ ಚಂದ್ರಬಿಂಬದಲ್ಲಿ ಯಾವ ದುರ್ದಶೆಯು ಕಾಣಬರುವುದೋ ಅಂತಹ ದುರ್ನಿಮಿತ್ತವೇ ಹೊರಸೂಸುತಲಿತ್ತು. ಹಣೆಯಲ್ಲಿ ಮುತ್ತಿನಂತಹ ಬೆವರ ಹನಿಗಳು ಎದ್ದು ಕಾಣುತಿದ್ದವು.

ಯಾರೋ ಕೋಣೆಯೊಳಗೆ ಬಂದಂತಾಯಿತು. ಕಾಲಿನ ಸಪ್ಪಳವು ನೇಮಿಯ ತೀರ ಸಮೀಪದಲ್ಲಿ ನಿಂತಿತು. ಅಂಧನು ನೀರವವಾಗಿ ಕುಳಿತಿದ್ದನು. ಬಂದ ವ್ಯಕ್ತಿಯು ಹೊರಗೆ ಹೊರಟುಹೋಯಿತು. ಹೊರಗಿನಿಂದ ಗಟ್ಟಿಯಾದ ನಗುವು ಕೇಳಿಸಿತು.

ನೇಮಿಚಂದ್ರನು ಮೊದಲಿನಂತೆಯೇ ಗೋಡೆಯನ್ನು ನಿಶ್ಚಲದೃಷ್ಟಿಯಿಂದ ನೋಡುತಿದ್ದನು. ಅಧರಗಳು ಕೊಂಚ-ಕೊಂಚ ಮಾತ್ರ ಕಂಪಿಸುತಿದ್ದವು.

ಯಾರೋ ಇನ್ನೊಬ್ಬನು ಕೋಣೆಯೊಳಗೆ ಬಂದು, ಕುರುಡನ ಸಮೀಪದಲ್ಲಿ ನಿಂತನು.

'ಹೇ! ನಿನ್ನ ಹೆಸರೇನೂ? ಕಿಟ್ಟು?'

'ಅಲ್ಲ ಸ್ವಾಮಿ. ರುಸ್ತುಂ.'

ಸ್ವರವು ನೇಮಿಚಂದ್ರನ ಮನಸ್ಸಿಗೆ ಹಿಡಿಯದೆ ಹೋಯಿತು. ಮೊದಲಿನಂತೆಯೇ ಅವನು ನೀರವವಾಗಿ ಕುಳಿತಿದ್ದನು. ಬಂದವನು ಹಿಂದೆ ಹೊರಟು ಹೋದನು.

ಮತ್ತೊಬ್ಬನು ಕೋಣೆಯೊಳಗೆ ಬಂದನು.

ಮೂರೇ ಹೆಜ್ಜೆಗಳು; ಬಂದವನು ನಿಂತುಬಿಟ್ಟನು! ಬೋನಿಗೆ ಬೀಳಲು ಹೋಗುವೆನೆಂದು ತಿಳಿದೂ, ಬೋನಿರುವ ಸ್ಥಳವನ್ನರಿಯದೆ ಗಾಬರಿಗೊಳ್ಳುವ ಮೃಗದ ದೃಶ್ಯ! ಭಯಗ್ರಸ್ತವಾದ ಕಣ್ಣುಗಳು! ಅರಳಿದ್ದ ಮೂಗು! ನಡುಗುತ್ತಿದ್ದ ದಪ್ಪವಾದ ತುಟಿ!

ಹಿಂದಿನಿಂದ ಏನೋ ಸದ್ದಾದಂತಾಯಿತು. ಆಗಂತುಕನು ರಮ್ಮನೆ ಹಿಂದಿರುಗಿದನು. ಕುರುಡನೋರ್ವನು ಕೈಯಲ್ಲೊಂದು ಚೂರಿಯನ್ನು ಬಿಡಿಸಿ ಹಿಡಿದುಕೊಂಡು, ತನ್ನನ್ನೇ ಅಂಧಚಕ್ಷುಗಳಿಂದ ಹೀರುತಿರುವುದನ್ನು ಕಂಡು ಬೆದರಿ ಹೋದನು.

ಅಂಧನ ಅಧರಗಳಲ್ಲಿ ಮೊದಲಿನಂತೆಯೇ ಅಂಧವಾದ ನಗು!

ಕಣ್ಣುಗಳಿಲ್ಲದೆ ಭೀಕರವಾದ, ಮೌನವಾದ ನಗೆಯನ್ನು ನಗುತಿರುವ ಆ ಮುಖವನ್ನು ಕಂಡೊಡನೆಯೇ, ಆ ಪಾಪಿಷ್ಠನು ಅಮಾನುಷವಾಗಿ ಅರಚಿಕೊಂಡನು.

ಅಂಧರಿಗೆ ಶ್ರವಣಶಕ್ತಿಯೇ ಜೀವನಾವಲಂಬನ. ಅವರಿಗೆ ಕಿವಿಗಳೇ ಕಣ್ಣುಗಳ ಕೆಲಸವನ್ನು ಮಾಡುವವು. ಜನರು ಎಷ್ಟು ದೂರದಲ್ಲಿದ್ದಾರೆ, ಯಾವ ದಿಕ್ಕಿನಲ್ಲಿದ್ದಾರೆ, ಎಂದು ಅವರು ಕೇವಲ ಶ್ರವಣಶಕ್ತಿಯಿಂದಲೇ ಅನುಭವ ಮಾಡಿಕೊಳ್ಳಬಲ್ಲರು. ನೇಮಿಚಂದ್ರನು ಶಬ್ದಸ್ಥಾನಾನುಭವದಿಂದಲೇ ಕೈದಿಯ ಬಳಿಗೆ ಹಾರಿ, ಚೂರಿಯಿಂದ ಅವನ ಕಾಲಿಗೆ ಬಲವಾಗಿ ತಿವಿದನು. ಪಾಮರನಾದ ಕೊಲೆಪಾತಕಿಯು 'ಅಯ್ಯೋ' ಎಂದು ಕರ್ಣಕಠೋರವಾಗಿ ಚೀತ್ಕಾರಮಾಡುತ್ತಾ, ಭೂಮಿಯಲ್ಲಿ ಬಿದ್ದುಬಿಟ್ಟನು.

'ಹೋ, ಕೈದಿಯು ಖೂನಿಯಾದನು! ಖೂನಿಯಾದನು!!' ಎಂದು ಕೂಗುತ್ತಾ ಪೋಲೀಸಿನವರು ಕೋಣೆಯೊಳಗೆ ಬಂದು ತುಂಬಿದರು. ಆದರೆ ವಾಸ್ತವವಾಗಿ ಆ ಪಾಪಿಷ್ಟನು ಖೂನಿಯಾಗಿರಲಿಲ್ಲ. ನ್ಯಾಯದೇವತೆಯ ತೀವ್ರವಾದ ದಂಡನೆಯನ್ನು ಅನುಭವಿಸಲು ಇನ್ನೂ ಜೀವಂತನಾಗಿದ್ದನು.

ಕೆಲಮಂದಿ ಪೋಲೀಸಿನವರು ಕೈದಿಯನ್ನು ಬೇರೊಂದು ಕಡೆಗೆ ಕರೆದುಕೊಂಡು ಹೋದರು. ಕುರುಡನನ್ನು ಅವನ ಮನೆಗೆ ಒಯ್ಯಬೇಕೆಂದು ಬಹಳ ಪ್ರಯತ್ನಿಸಿದರು. ಆದರೆ ಅದು ಅಷ್ಟೊಂದು ಸುಲಭವಾಗಿರಲಿಲ್ಲ. ನೇಮಿಚಂದ್ರನು ಉನ್ಮತ್ತನಂತೆ ಚೂರಿಯನ್ನು ಬೀಸುತಲಿದ್ದನು. ವರ್ಷಾ

ಕಾಲದಲ್ಲಿ ಅರಳಿದ ಹೂವಿನೊಳಗೆ ನೀರು ತುಂಬಿದ್ದು ರೆಂಬೆಯನ್ನು ಅಲುಗಿಸಿ ಬಿಟ್ಟೊಡನೆ ನೀರು ಹೇಗೆ ಕೆಳಕ್ಕುರುಳುವುದೋ ಅಂತೆಯೇ ನೇಮಿಚಂದ್ರನ ಅವಸ್ಥೆಯಾಗಿತ್ತು. ಹತ್ತು ವರ್ಷಗಳ ವರೆಗೆ ಕಟ್ಟಿಟ್ಟಿದ್ದ ಆಣೆಕಟ್ಟು, ಇಂದು ಜರಿದು ಬಿದ್ದುಹೋಯಿತು. ಹತ್ತು ವರ್ಷಗಳ ವರೆಗೆ ತಾಳ್ಮೆಯ ಮೂರ್ತಿಯಾಗಿದ್ದ ನೇಮಿಚಂದ್ರನು ಇಂದು ಸಿಡಿದು ಹೋದನು.

* * * * * *

ಗುಡಿಸಲಿನೊಳಗೆ ನೇಮಿಚಂದ್ರನು ಅಳುತಿದ್ದನು. ಅಂದು ಬೆಂಕಿ ಬಿದ್ದಾಗ ಅಳುತಿದ್ದ ರೀತಿಯೇ ಬೇರೆ; ಇಂದಿನ ವಿಧಾನವೇ ಬೇರೆ: ಅಂದು ಧಾರೆಧಾರೆಯಾಗಿ, ಬಿಸಿಬಿಸಿಯಾಗಿ ಹರಿಯುತಲಿದ್ದ ಕಣ್ಣೀರು, ಇಂದು ಬಿಂದುಬಿಂದುವಾಗಿ ಶೀತಲವಾಗಿ ಹರಿಯುತಲಿದೆ.

ಒಂದು ದಿನ ಮಧ್ಯಾಹ್ನ ನೇಮಿಚಂದ್ರನಿಗೆ ಅಂಚೆಯವನೊಂದು ಭಾರವಾದ ಕಟ್ಟನ್ನು ತಂದುಕೊಟ್ಟನು. ನೇಮಿಚಂದ್ರನು ಅದನ್ನು ಮುಟ್ಟಲೂ ಇಲ್ಲ. ಅವನ ತಾಯಿಯು ಕಟ್ಟನ್ನು ತಾನೇ ಬಿಚ್ಚಿ ನೋಡಿದಳು. ಅದರೊಳಗೊಂದು ಕಂಚಿನ ಮುಖವೂ, ಚೂರಿಯನ್ನು ಹಿಡಿದಿದ್ದ ಕೈಯೂ, ಸ್ವಲ್ಪ ಹಣವೂ ಇದ್ದವು. ತಾಯಿಯು ಅವನ್ನು ತಂದು ಮಗನೆದುರಿಗಿಟ್ಟು ಕೂಗುತ್ತಾ ಹೊರಟುಹೋದಳು. ನೇಮಿಚಂದ್ರನಿಗೆ ಅವನ್ನು ಕಂಡು ಸಂತೋಷವಾಗಲಿಲ್ಲ. ಈಗಲೂ ಅವನು ಮೊದಲಿನಂತೆಯೇ ಅಂಧಕಾರಮಯವಾದ ದುಃಖದಲ್ಲಿ ಮುಳುಗಿಹೋಗಿದ್ದನು. ಈಗಲೂ ಅಂಧಚಕ್ಷುಗಳಿಂದ ಬಿಂದುಬಿಂದುವಾಗಿ ಶೀತಳವಾಗಿ ವಾರಿಧಾರೆಯು ಹರಿಯುತಲಿತ್ತು.

ಕಾರಣ, ಕೈಗೆ ಸಿಕ್ಕಿದ ಹಕ್ಕಿಯು ಹಾರಿಹೋದ ಬಳಿಕ, ಅವನಿಗೆ ಜೀವನವು ನೀರಸವಾಗಿ ತೋರಿತು; ಜಡವಾದುದೆಂದು ತೋರಿತು; ಹೃದಯವು ಘೋರ ಅಂಧಕಾರಮಯವಾಗಿ ತೋರಿತು. ನೇಮಿಚಂದ್ರನು ಆ ಅಂಧಕಾರದಲ್ಲಿ ಒಂದು ಜ್ಯೋತಿಯ ಸಲುವಾಗಿ ಶೋಧಿಸುತಿದ್ದನು. ಆ ಜ್ಯೋತಿಯು ಇನ್ನೆಷ್ಟು ಕಾಲ ಆತನನ್ನು ತಪ್ಪಿಸಿ ತೊಳಲುವಂತೆ ಮಾಡುವುದೊ, ಯಾರಿಗೆ ಗೊತ್ತು?

# ದೀಪಾವಳಿ.



ದೀಪಾವಳಿಯೆಂದು ಹಿಂದುಗಳಲ್ಲಿ 'ಎಣ್ಣೆಯ ಸ್ನಾನ'ದ ಸುಖವನ್ನು ಸವಿಯದವರೇ ಇಲ್ಲ. ವರ್ಷದ ನಡುವೆ ಒಮ್ಮೆಯಾದರೂ ಮೀಯಲಾರದ ಎಂತಹ ದರಿದ್ರನಾದರೂ, ದೀಪಾವಳಿಯ ದಿನ ಅದರ ಪೂರ್ಣ ಸುಖವನ್ನು ಅನುಭವಿಸುವನು. ಹಬ್ಬದ ದಿನಗಳೆಂದರೆ ಬಡವರಿಗಾಗಿ ನಿರ್ಮಿಸಲ್ಪಟ್ಟವುಗಳು. ಎರಡು ದಿನಗಳಿಗೊಮ್ಮೆ ಸಾಮಾನ್ಯ ಭಕ್ಷ್ಯಭೋಜ್ಯಗಳನ್ನು ಕೂಡ ಮಾಡಿ ತಿನ್ನಲು ಅನುಕೂಲತೆಯಿಲ್ಲದ ಅವರು ಅಂದು ಒಂದೆರಡು ಬಗೆಯ ಒಳ್ಳೊಳ್ಳೇ ಖಾದ್ಯಗಳನ್ನು ಮಾಡಿ ಉಂಡು ಸುಖಿಸುವರು.

ನೇತ್ರಾವತಿಯ ದಡದಲ್ಲಿ ಒಂದು ಚಿಕ್ಕ ಗುಡಿಸಲು. ಆ ಗುಡಿಸಲಿನಲ್ಲಿ ವಾಸವಿರುವವರು ತಂದೆ ಮತ್ತು ಮಗಳು—ಇಬ್ಬರೆ. ತಂದೆ ವೃತ್ತಿಯಲ್ಲಿ ಮೊಗೇರ. ಹೆಸರು ಸೋಮಯ್ಯ. ಗಿರಿಜೆಯೆಂದು ಮಗಳ ಹೆಸರು. ಅನೇಕರಂತೆ ಆಕೆಯೂ ತಾಯಿಯನ್ನು ಕಳಕೊಂಡ ನಿರ್ಭಾಗ್ಯೆ. ಈಗ ಎಲ್ಲ ಮನೆಗೆಲಸವನ್ನು ಮಾಡುವ ಭಾರ ಅವಳ ಮೇಲೆ. ತಂದೆಗೆ ಅವಳೆಂದರೆ ಬಹಳ ಪ್ರೀತಿ. ಅವಳಿಗೂ ತಂದೆಯ ಮೇಲೆ ನಿಸ್ಸೀಮ ಶ್ರದ್ಧೆ.

ಅಂದು ಎಂದಿನಂತೆ ಮುಂಜಾನೆಯೆದ್ದು ಸೋಮಯ್ಯನು ಮೀನು ಹಿಡಿಯಲು ಸಮುದ್ರಕ್ಕೆ ಹೋಗಿದ್ದನು. ಹಬ್ಬದ ದಿನವಾದರೂ ಮನೆಯಲ್ಲಿ ಕುಳಿತುಕೊಂಡು ಸುಖಿಸುವಷ್ಟು ಸಿರಿತನವು ಆತನ ಪಾಲಿಗಿರಲಿಲ್ಲ. ದಿನನಿತ್ಯ ದುಡಿದು ಹೊಟ್ಟೆಗೆ ಬಗೆ ಮಾಡಬೇಕು. ಒಂದು ದಿನ ಮೀನು ಸಿಗದಿದ್ದರೆ ಮನೆಯಲ್ಲಿ ಅರೆಹೊಟ್ಟೆಯ ಉಪವಾಸ ಮಾಡಬೇಕು. ಆದರೂ ಸೋಮಯ್ಯನು, ದುಡಿದ ಹಣದಲ್ಲಿ ಆದಷ್ಟು ಕಸವಿಸಿ ಮಾಡಿ ಮಗಳ ಮದುವೆಗೆಂದು, ಒಂದಿಷ್ಟು ಹಣವನ್ನು ಶೇಖರಿಸಿಟ್ಟಿದ್ದನು. ಮಗಳನ್ನು ಒಳ್ಳೇ

ಕಡೆಯಲ್ಲಿ ಕೊಡಬೇಕು; ಕುತ್ತಿಗೆ ತುಂಬ ಆಭರಣವಿಡಬೇಕು; ಮದುವೆ ಸಂಭ್ರಮದಿಂದ ಜರಗಬೇಕು; ಎಂಬುದೊಂದೇ ಆತನ ಜೀವನದ ಆಸೆ.

ಹೊರಗೆ ಹೋಗುವಾಗ ಮಗಳಿಗೆ ಮನೆಯ ಜಾಗ್ರತೆಯನ್ನು ಹೇಳಿ ಹೋಗುವುದು ಆತನ ಕ್ರಮ. ಹಾಗೆಯೇ ಆ ದಿನವೂ "ಮಗೂ, ನಾನು ಈ ಹೊತ್ತು ಬರುವಾಗ ಸ್ವಲ್ಪ ತಡವಾದೀತು. ಆದರೆ ಆದಷ್ಟು ಬೇಗನೆ ಬರುವೆನು. ಜೋಕೆ! ನಾನು ಬರುವ ತನಕ ಬಾಗಿಲು ಅಡ್ಡಮಾಡಿಕೊ' ಎಂದು ಹೇಳಿ ಹೋಗಿದ್ದನು.

ಅಂದು ಆತನ ಹೃದಯವು ಅನೇಕ ಆಲೋಚನೆಗಳಿಂದ ಕರಗಿ ನೀರಾಗಿತ್ತು. 'ಪಾಪ! ತಾಯಿಯಿಲ್ಲದ ಹುಡುಗಿ. ನಾನೆಂದರೆ ಪ್ರಾಣ ಬಿಡುವಳು. ಅವಳೀಗಿದ್ದಿದ್ದರೆ ಮಗಳ ನಡೆನುಡಿಗಳನ್ನು ನೋಡಿ ಎಷ್ಟು ಸಂತೋಷಪಡುತಿದ್ದಳೊ? ನನಗೊಂದು ಈ ಹಾಳು 'ಬಡತನದ ಕಾಟ! ಇಲ್ಲವಾದರೆ ಅಷ್ಟು ಚಿಕ್ಕ ಬಾಲಿಕೆಯ ಮೇಲೆ ಎಲ್ಲ ಮನೆಗೆಲಸದ ಭಾರವನ್ನು ಹಾಕುತಿದ್ದೆನೇ? ಆದರೆ ಎಷ್ಟು ಕಷ್ಟಗಳು ಬಂದೊದಗಿದರೂ ಆಕೆಯನ್ನು ಹಾದಿಗೆ ತಳ್ಳಲಾರೆ. ಈ ಹೊತ್ತು ಮೀನು ಸಿಕ್ಕಿದರೆ ಒಂದು ಮಲ್ಲಿಗೆಯ ಚೆಂಡನ್ನು ತಂದು ಕೊಡುವೆನು ಅವಳಿಗೆ . . . . ." ಎಂದು ಮಾರ್ಗದಲ್ಲಿ ಹೋಗುತ್ತ ಆತನು ಎಣಿಸಿದ್ದನು.

ತಂದೆ ಹೋದ ಬಳಿಕ ಮನೆಯಲ್ಲಿ ಮಗಳು ಒಬ್ಬಳೆ. ಆದರೆ ಅವಳಿಗೆ ಬೇಸರವೆಂಬುದಿಲ್ಲ. ಅವಳಾದಳು—ಅವಳ ಕೆಲಸವಾಯಿತು. ಕೆಲಸ ಮುಗಿದ ಬಳಿಕ ತಂದೆಯ ಆಗಮನವನ್ನು ಪ್ರತೀಕ್ಷಿಸುತ್ತ ಕುಳಿತು ಕೊಳ್ಳುವಳು. ತಂದೆ ಬಂದೊಡನೆ ಆತನ ಕೈಗಳನ್ನು ಹಿಡಕೊಂಡು, ತನ್ನ ಮುದ್ದುಮಾತುಗಳಿಂದ ಆತನ ದಣಿದ ಮನಸ್ಸನ್ನು ತಣಿಸುವಳು. ಅವಳಿಗದೊಂದು ಪಾಠವಾಗಿತ್ತು. ಆದರೆ ಅಂದು ಹಬ್ಬದ ದಿನವಾದುದ ರಿಂದ ಅವಳಿಗೆ ಎಂದಿಗಿಂತ ಸ್ವಲ್ಪ ಉಲ್ಲಾಸ ಹೆಚ್ಚು. ತಾಯಿಯ ಕಾಲದ ರೂಢಿಯಂತೆ ತಂದೆಯನ್ನು ಸಂತುಷ್ಟಿಗೊಳಿಸಿ, ಆತನ ಮನಸ್ಸನ್ನು ವಿಶೇಷ ಒಲಿಸಬೇಕೆಂದು ಆಕೆ ನಿರ್ಧರಿಸಿದ್ದೇ ಅದಕ್ಕೆ ಕಾರಣ.

ತನ್ನ ನಿರ್ಧಾರದ ಕುರಿತು ಆಲೋಚಿಸುತ್ತ ಆಕೆಯು ಮನಸ್ಸಿ ನಲ್ಲಿಯೇ ಮುಗುಳ್ನಗೆ ನಗುವಳು. "ತಾಯಿಯಿದ್ದಿದ್ದರೆ ಇಂದಿನ ಅಂತ

ಚಂದವೇ ಬೇರೆಯಿತ್ತು. ನಾನು ಎಷ್ಟಾದರೂ ಹುಡುಗಿ. ತಂದೆಗೆ ನನ್ನ ಎಳೆಯ ಬುದ್ಧಿಯ ಯುಕ್ತಿಯಿಂದ ಅಷ್ಟು ಸಂತೋಷಪಡಲು ಆಗುವು ದಿಲ್ಲ. ಆತನು ತಾಯಿಯನ್ನು ಮನಸ್ಸಿನಲ್ಲಿ ಎಷ್ಟು ನೆನೆಯುವನೊ? ಆದರೆ ಹಬ್ಬದ ರೂಢಿಯಂತೆ ಆತನನ್ನು ಎಣ್ಣೆಹಚ್ಚಿ ಮಿಯಿಸಿ, ನಾನಾ ತರದ ಭಕ್ಷ್ಯಭೋಜ್ಯಗಳನ್ನು ಮಾಡಿ ಬಡಿಸಿ, ಆತನ ಮನಸ್ಸನ್ನು ಸಂತುಷ್ಟಿಗೊಳಿಸಿ, ತಾಯಿಯ ನೆನಪಾಗದಂತೆ ಮಾಡುವೆನು. ದೇವರ ಮಂಟಪವನ್ನು ಬಹಳ ಸುಂದರವಾಗಿ ಸಿಂಗರಿಸಿ, ಮನೆಯಲ್ಲಿರುವ ಎಲ್ಲ ದೀಪಗಳಿಗೆ ಎಣ್ಣೆಹಾಕಿ ಇಡುವೆನು. ಅವಲಕ್ಕಿಯನ್ನು ಬೆಲ್ಲದಲ್ಲಿ ಹಾಕಿ ಕಲಸಿ, ದೇವರಿಗೆ ನೈವೇದ್ಯ ಮಾಡುವೆನು. ಆತನಿಗೆ ಒಮ್ಮೆಗೇ ಆಶ್ಚರ್ಯ—ಆನಂದಗಳುಂಟಾಗ ಬೇಕು. ಏನು ಮಾಡಲಿ? . . . ಹೌದು! . . . ಬಾಗಿಲಿಗೆ ಕೀಲುಹಾಕಿ ಒಳಗೆ ಕುಳಿತುಕೊಳ್ಳುವೆನು. ಆತನು ಬಂದು ಬಾಗಿಲು ತಟ್ಟಿದೊಡನೆ ದೀವಿಗೆ ಬೆಳ ಗಿಸುವೆನು. ಅವುಗಳ ಪ್ರಕಾಶದಿಂದ ಆತನಿಗೆ ಕಣ್ಣುಗಳು ಕುಕ್ಕಿದಂತಾಗ ಬೇಕು. ಆಗ ಇಡೀ ದಿನದ ದಣುವು ಆರಿ, ಆತನ ಮನಸ್ಸು ಹಿರಿಹಿರಿ ಹಿಗ್ಗಬಹುದು. ಪ್ರೇಮದಿಂದಾತನು ನನ್ನನ್ನು ಮುತ್ತಿಡಬಹುದು. ನಾಳೆ ಆಡಲಿಕ್ಕೊಂದು ಗೊಂಬೆಯನ್ನು ತಂದುಕೊಡಬಹುದು . . . . . .'' ಹೀಗೆ ಆಲೋಚಿಸುತ್ತ ಆಕೆ ನವೋತ್ಸಾಹದಿಂದ ತನ್ನ ಕೆಲಸದಲ್ಲಿ ವ್ಯೆಮರೆತಳು.

ಮನೆಗೆಲಸವನ್ನು ಮಾಡುತಿರುವಾಗ ಅವಳು ಅದೇನೇನು ಸವಿಗನಸು ಗಳನ್ನು ಕಂಡಳೊ! ಅರಳಿದ ಹೃದಯವು ಮುಖದ ಮೇಲೆ ಒಡಮೂಡಿ ದ್ದಿತು. ಸಂತೋಷಭರದಲ್ಲಿ ತಾನು ಎಳೆಯ ದಿನಗಳಲ್ಲಿ ಕಲಿತ ಹಾಡೊಂದು ಅವಳಿಗೆ ನೆನಪಿಗೆ ಬಂದಿತು.

**ದೇಶದಲಿ ದೀಪಾವಳಿಯ ದಿನವಿದೆಂದು**
**ತೋಷದಲಿ ಹಾಡಿದರು ಬಾಲಕರು ಬಂದು.**

ಅವಳು ಹಾಡುತಿದ್ದಂತೆಯೆ ಅವಳ ಹಾಡಿನಲ್ಲಿ ಮನಸ್ಸಿನ ಉಲ್ಲಾಸವು ಒಡಮೂಡಿ, ಅದೊಂದು ಬಗೆಯ ಮಾಧುರ್ಯವು ಹೊರಹೊಮ್ಮುತಿತ್ತು. ಒಳಿಯಲ್ಲಿ ಯಾರೂ ಇರಲಿಲ್ಲ; ಮನೆಗೆಲಸವೆಲ್ಲ ಮುಗಿದಿತ್ತು. ಆದಕಾರಣ ಆಕೆ ತಂದೆ ಬರುವ ತನಕ ಒಬ್ಬಳೇ ಆಗಿದ್ದ ಬೇಸರವನ್ನು ಮರೆಯಲು, ತನ್ನ ಆನಂದವನ್ನು ಹಾಡಿನಲ್ಲಿ ಕೂಡಿವೆರೆಯಲೆತ್ನಿಸುತಿದ್ದಳು. ಆ ಸರಳ

ಹೃದಯದಿಂದ ಚಿಮ್ಮುತ್ತಿರುವ ಇಂಪಾದ ಆ ಸಂಗೀತಾಮೃತವನ್ನು ಸವಿದು. ಸೋಮಯ್ಯನ ಬಾಡಿದ ಮೊಗ ಎಷ್ಟೋ ಸಲ ಹಸಾದದ ನಗೆಮುಗುಳಾಗಿತ್ತು. ಇಂತಹ ಮಗಳನ್ನು ಪಡೆದ ಆ ತಂದೆಯೇ ಧನ್ಯನು!

* * * * * *

ಸಂಜೆಯಾಯಿತು. ತಂದೆ ಬರುವ ಸಮಯ ಮೀರಿತು! ಎಂದಿಗಿಂತ ಮುಂಚಿತವಾಗಿ ಬರುವೆನೆಂದು ಹೇಳಿಹೋದ ತಂದೆ ಇನ್ನೂ ಬರಲಿಲ್ಲವೇಕೆ? ಮಗಳಿಗೆ ವಿಚಾರಕ್ಕಿಟ್ಟಿತು. ಅನೇಕ ವಿಚಾರಗಳು ಆಕೆಯ ಮನಸ್ಸಿನಲ್ಲಿ ಸೋಸಿಹೋದುವು. 'ಸಾಯಂಕಾಲ; ಆಕಾಶವು ಮೋಡಗಳಿಂದ ದುರುಗುಟ್ಟುತಿದೆ. ಬಿರುಗಾಳಿ ಬೀಸಿ ತಂದೆಯ ದೋಣಿ ಮುಳುಗಿರಲಿಕ್ಕಿಲ್ಲವೇನು? ಆತನು ಮುಳುಗಿದರೆ ನನಗೆ ಗತಿ ಯಾರು? ಎಂದೂ ಆತನು ಹೇಳಿದ ಮಾತಿಗೆ ತಪ್ಪಿದವನಲ್ಲ........ಹಬ್ಬದ ದಿನವಲ್ಲವೆ? ಏನಾದರು ಸಾಮಾನುಗಳನ್ನು ತರಲು ಪೇಟೆಗೆ ಹೋಗಿರಬಹುದು. ಹೋಗುವಾಗಲೆ ಹೇಳಿಹೋಗಿದ್ದನು—ಸ್ವಲ್ಪ ತಡವಾದರೂ ಆಗಬಹುದೆಂದು..................'
ಎಂದು ಮತ್ತೆ ಆಲೋಚಿಸಿದಳಾಕೆ. ಆದರೆ ಮನಸ್ಸಿಗೆ ಸಮಾಧಾನವಿರಲಿಲ್ಲ. ಆತುರದಿಂದ ಆತನ ಬರವನ್ನು ಪ್ರತೀಕ್ಷಿಸುತ್ತ ಕುಳಿತುಕೊಂಡಳು.

ಅಷ್ಟರಲ್ಲಿ ಹೊರಗೆ ಯಾರೋ ಬಾಗಿಲು ತಟ್ಟಿದ ಶಬ್ದವಾಯಿತು. ಆಗ ಸರಿ ಕತ್ತಲಾಗಿತ್ತು. ಅಂತರಿಕ್ಷವೆಲ್ಲ ಮೋಡಗಳಿಂದ ಬಿಡುಗಡೆಗೊಂಡು ನಿಚ್ಚಳವಾಗಿತ್ತು. ಅಲ್ಲಲ್ಲಿ ತಾರೆಗಳು ಮಿನುಗುತಿದ್ದವು. ಒಳಗೆ ಕುಳಿತುಕೊಂಡಿದ್ದ ಗಿರಿಜೆ ತಂದೆ ಬಂದನೆಂದು ಸಂತೋಷದಿಂದ ಹಿಗ್ಗಿ, ಬೇಗಬೇಗನೆ ದೇವರ ಮಂಟಪದ ಬಳಿಯಲ್ಲಿಯ ದೀಪಗಳನ್ನು ಹಚ್ಚಿದಳು. ಆಗಿನ ಆಕೆಯ ಮನಸ್ಸಿನ ಉತ್ಸಾಹವು ಅಷ್ಟಿಷ್ಟೆಂದು ವರ್ಣಿಸಲಸದಳವಾಗಿತ್ತು. ಬೇಸಗೆಯ ಬಿಸಿಲಿಗೆ ಬೆಂದು ಗಾರಾದ ಹೊಲಗಳು ವರ್ಷಾಕಾಲದ ಆಗಮನದಿಂದ ಸ್ಫೂರ್ತಿಗೊಳ್ಳುವಂತೆ, ತಂದೆಯು ಸುರಕ್ಷಿತವಾಗಿ ಮನೆಯನ್ನು ಬಂದು ಮುಟ್ಟಿದನೆಂದು ಆಕೆಯ ಬೆದರಿದ ಹೃದಯವು ಹರುಷದಿಂದ ನಲಿದಾಡಿತು. ಆತನ ಕುರಿತು ತನ್ನ ಭಯಾಭಯಗಳು ಅಕಾರಣವಾದವುಗಳೆಂದೆನಿಸಿತು. ದೇವರು ಎಷ್ಟಾದರೂ ಕರುಣಾಳುವಲ್ಲವೆ? ಹಾಲುಗಲ್ಲಿನ ಬಾಲಿಕೆಯಾದ ತನ್ನನ್ನು ಆತನು ನಿರಾಧಾರೆಯನ್ನಾಗಿ ಮಾಡುವನೆ? ಎದುರಿಗಿರುವ ಮಂಟಪದಲ್ಲಿದ್ದ ಆತನೇ ತನ್ನ ಭಕ್ತಿಗೆ ಮೆಚ್ಚಿ,

ತಂದೆಯನ್ನು ಬಿರುಗಾಳಿಯ ಬಾಯಿಯಿಂದ ಬದುಕಿಸಿರುವನು.......... ಹೀಗೆ ಆಲೋಚಿಸುತ್ತ ಗಿರಿಜೆ ಒಮ್ಮೆ ಸಾಷ್ಟಾಂಗ ಪ್ರಣಾಮವಮಾಡಿದಳು. ಇಷ್ಟೆಲ್ಲ ನಡೆದುದು ಮಿಂಚಿನ ವೇಗದಿಂದ. ಬಳಿಕ ಅವಳು ಮೆಲ್ಲನೆ ಬಾಗಿಲ ಕೀಲನ್ನು ಕಳಚಿ, ಓಡಿಹೋಗಿ, ಒಂದು ಪತ್ತಾಯದ ಅಡ್ಡ ಅವಿತುಕೊಂಡು, 'ಒಳಗೆ ಬಾ' ಎಂದಳು.

ಹೊರಗಿದ್ದವನು ಮೆಲ್ಲನೆ ಬಾಗಿಲನ್ನು ತೆರೆದು ಒಳಗೆ ನಡೆದನು. ಒಳಗೆ ಯಾರೂ ಇರಲಿಲ್ಲ. ದೇವರ ಮಂಟಪದ ಬಳಿಯಲ್ಲಿ ಸಂತೋಷದ ಕುರುಹಾಗಿ ಅನೇಕ ದೀಪಗಳು ದೇದಿಪ್ಯಮಾನವಾಗಿ ಉರಿಯುತಿದ್ದವು. ಸುತ್ತಲೂ ಒಂದು ತರದ ಪವಿತ್ರ ಪ್ರಶಾಂತತೆಯು ಪಸರಿತ್ತು. ದೇವರ ವಾಸಸ್ಥಾನಗಳೆಂದೆಣಿಸುವ ದೇಗುಲಗಳಲ್ಲಿಯೂ ಅಂತಹ ಶಾಂತತೆಯೂ ನಿಸರ್ಗತೆಯೂ ಇರಲಿಕ್ಕಿಲ್ಲ. ಆಗಂತುಕನು ಕಣ್ಣುಕುಕ್ಕಿದವನಂತೆ ಅವು ಗಳನ್ನು ನೋಡುತ್ತ ನಿಂತುಕೊಂಡನು. ನೋಡನೋಡುತ್ತ ಮನಸ್ಸಿನಲ್ಲಿ ವೈರಾಗ್ಯವು ಮೂಡಿತು. ತಾನು ಎಷ್ಟು ಕಷ್ಟದ ಕಾರ್ಯವನ್ನು ಮಾಡಲು ಬಂದಿರುವೆನೆಂದೆನಿಸಿತು. ಅಷ್ಟರಲ್ಲಿ ಪತ್ತಾಯದ ಮರೆಯಿಂದ ಬಾಲಿ ಕೆಯು ಚಿಗರಿಯ ಮರಿಯಂತೆ ಹಾರಿ ಬಂದು, 'ಅಪ್ಪಾ, ಮಂಟಪವನ್ನು ಸಿಂಗರಿಸಿದ್ದು ಚೆನ್ನಾಗಿದೆಯೋ? ಬೇಗ ಎಣ್ಣೆ ಹಚ್ಚಿಕೊ; ಬಿರುಗಾಳಿ ಯಿಂದೇನು ಅಪಾಯವಾಗಲಿಲ್ಲವೊ? . . . . . ಎಂತಹ ಗಾಳಿಯಪ್ಪಾ! ದೇವರ ದಯೆಯಿಂದ ಬದುಕಿಬಂದೆ . . . . . ಬೇಗ ಮಿಯಿಸುತ್ತೇನೆ. ಒಳ್ಳೊಳ್ಳೇ ಪದಾರ್ಥಗಳನ್ನು ಮಾಡಿರುವೆನು . . . . . . ಮಂಟಪವನ್ನು ಸಿಂಗರಿಸಿದ್ದು ಚೆನ್ನಾಗಿದೆಯೋ? . . . . . .' ಎಂಬುದಾಗಿ ತನ್ನ ಹೃದಯದ ಹಿಗ್ಗನ್ನು ಮಾತುಗಳಲ್ಲಿ ಮೂಡಿಸಿ ನುಡಿದಳು.

ಆಗಂತುಕನಿಗೆ ಹುಡುಗಿಯ ಸರಳಬಿನ್ನಾಣವನ್ನೂ ಮುಗ್ಧತೆಯುನ್ನೂ ನೋಡಿ ಹೃದಯ ಹರಿಯಿತು. ಮನಸ್ಸಿನಲ್ಲಿಯೇ 'ತಂದೆ....ಬಿರುಗಾಳಿ.... ಬದುಕಿಬಂದನು....ಹಾಯ್! ಅದನ್ನು ನನ್ನ ಈ ಹಾಳು ಬಾಯಿಯಿಂದ ಹೇಗೆ ಹೇಳಲಿ!' ಎಂದೆನ್ನಿಸಿತು. ಒಂದಿದ್ದ ಬಾಯಿ ಎರಡಾಗಲಿಲ್ಲ. ಅದೇನು? ಸ್ವಲ್ಪ ಕಣ್ಣೀರೂ ಕಾಣಿಸಿತು.

**ಆಗಂತುಕನ ಅಪರಿಚಿತ ಮೊಗವನ್ನು ನೋಡಿ ಹುಡುಗಿ ತಟಸ್ಥಳಾದಳು!**

# ನಿರಪರಾಧಿ.

೧.



ಮಾವನ ಮನೆಯ ವಾಸದ ಸುಖವು ಅನುಭವಿಸಿದವರಿಗೆ ಮಾತ್ರ ಗೊತ್ತು. ಅದರ ಸವಿಯನ್ನು ಕಾವ್ಯಾಮೃತಾಸ್ವಾದನದಂತೆ 'ಅಂತಿಂತುಂತೆನಲ್' ಬಾರದು. ಶ್ರೀನಾಥನಿಗೆ ಮಾವನ ಮನೆಯ ವಾಸವು ಸ್ವರ್ಗತುಲ್ಯವಾಗಿತ್ತು. ಅವನಿಗೆ ಯಾವುದು ಬೇಕು ಯಾವುದು ಬೇಡವೆಂದು ಹೇಳುವಷ್ಟು ಎಡೆ ಇರಲಿಲ್ಲ; ಎಲ್ಲವೂ ತನ್ನಿಂದ ತಾನೆ ನಡೆದು ಹೋಗುವಂತೆ ತೋರುತಿತ್ತು. ದೀಪಾವಳಿ ಹಬ್ಬದ ಕಾಲದಲ್ಲಿ ಮಾವನ ಮನೆಯಲ್ಲಿ ಒಂದೆರಡು ದಿನ ಉಳಿದುಕೊಂಡು ಹೋಗಬೇಕೆಂದು ಬಂದವನಿಗೆ ನಾಲ್ಕಾರು ದಿನ ತಡವಾಯಿತು. ಒಂದೊಂದು ದಿನ ಒಂದೊಂದು ನೆವದಿಂದ ಹೊರಡುವುದಕ್ಕಾಗದೆ ಪ್ರಯಾಣವು ನಿಂತುಹೋಗಿತ್ತು. ಶ್ರೀನಾಥನು ದಾಕ್ಷಿಣ್ಯದ ಮನುಷ್ಯ; ಎಳೆ ವಯಸ್ಸಿನ ಸುಂದರ. ಬಿ. ಎಲ್. ಪಾಸಾಗಿ ಆಗಲೇ ತನ್ನ ಉಪಾಧಿಪತ್ರವನ್ನು (ಸನದ್) ನಿರೀಕ್ಷಿಸುತಿದ್ದನು. ತನ್ನ ಊರಲ್ಲಿ ವಕಾಲತ್ತನ್ನಾರಂಭಿಸುವ ಹಂಚಿಕೆಯಲ್ಲಿ ಯೋಗ್ಯವಾದ ಆಫೀಸನ್ನು ಹುಡುಕುತ್ತ ತನ್ನ ಉದ್ಯೋಗಕ್ಕೆ ಸಿದ್ಧವಾಗುವ ಏರ್ಪಾಡಿನಲ್ಲಿದ್ದವನು, ಮಾವನ ಮನೆಗೆ ಬಂದು ಅನಿರೀಕ್ಷಿತವಾಗಿ ತನ್ನ ಎಣಿಕೆಯಂತೆ ಹೊರಡಲಾಗಲಿಲ್ಲ. ನಿರ್ವಾಹವಿಲ್ಲ! ನೆಂಟರ ಒತ್ತಾಯದ ಕಟ್ಟನ್ನು ಕಡಿದು ಹಾಕಿ ಮುಂದೆ ಹೋಗುವಷ್ಟು ಕಠಿನ ಮನಸ್ಸಿನವನು ಶ್ರೀನಾಥನಾಗಿರಲಿಲ್ಲ; ಹಾಗೂ ಹೀಗೂ ಮಧ್ಯಾಹ್ನದ ರೈಲಿಗೆ ಹೊರಡಲೇಬೇಕೆಂದು ನಿಶ್ಚಯಿಸಿ,

ಎಲ್ಲ ಸಿದ್ಧತೆಗಳೂ ನಡೆದುವು. ರೈಲಿಗೆ ಸರಿಯಾಗಿ ಹೋಗುವಂತೆ ಗಾಡಿಯ ವ್ಯವಸ್ಥೆಯೂ ಆಗಿತ್ತು. ಕಲ್ಯಾಣಮ್ಮನು, ಇಂದು ಎಂದೂ ಇಲ್ಲದ ತ್ವರಿತದಿಂದ ಅಡಿಗೆಯ ಏರ್ಪಾಡನ್ನು ಮಾಡುವ ಅವಸರದಲ್ಲಿದ್ದಳು. ಅಳಿಯನಿಗೆ ಈ ವರೆಗೆ ಮಾಡಿರುವ ಊಟ ಉಪಚಾರವು ಕಡಮೆಯಾಗಿತ್ತೆಂದೇ ಆಕೆಯ ಎಣಿಕೆ. ಸುಶೀಲೆಗೆ ಒಂದೆಡೆ ಸಂತೋಷ; ಒಂದೆಡೆ ಮರುಕ. ಕಣ್ಣೀರು ತುಂಬಿಕೊಂಡಿದೆ; ಆದರೆ ಕೆಳಗೆ ಜಾರಿ ಬೀಳಲೊಪ್ಪುವುದಿಲ್ಲ. ಮೊದ ಮೊದಲು ಗಂಡನ ಮನೆಗೆ ಹೋಗುವವರ ಸ್ಥಿತಿಯೇ ಹೀಗೆ. ದಾಮೋದರ ರಾಯರಿಗೆ, ಇಂದು, ಹೆಚ್ಚು ಮಾತೇ ಇಲ್ಲ. ಅಳಿಯನಿಗಿತ್ತಿರುವ ಉಡುಗೊರೆಯಲ್ಲಿ ಆತನು ತೃಪ್ತಿಪಟ್ಟಿರುವನೋ ಇಲ್ಲವೋ ಎಂಬ ಚಿಂತೆ ಅವರಿಗೆ; ಒಂದು ಪಕ್ಷ ಅದರಿಂದಲೇ ಶ್ರೀನಾಥನು ತೃಪ್ತನಾಗಿಲ್ಲವಾದರೆ ಊರಿಗೆ ಹೊರಡುವಾಗ, ಏಳೆಂಟು ಪವನಿನ ಒಂದು ಚಿನ್ನದ ಕಂಠಿಯನ್ನು ಕೊರಲಿಗೆ ಹಾಕಿಬಿಡಲೇ ಎಂಬ ಯೋಚನೆಯಲ್ಲಿಯೇ ಇದ್ದು ಒಳಗೊಳಗೆ ತಳಮಳಗೊಳ್ಳುತಿದ್ದರು. ದಾಮೋದರರಾಯರಂತಹ ಪ್ರಮುಖ ಸರಾಫ ಸಾಹುಕಾರರ ಅಳಿಯನಾಗುವ ಭಾಗ್ಯವನ್ನು ಪಡೆದಿರುವ ಶ್ರೀನಾಥನು ಬರಿಯ ವಜ್ರದುಂಗುರದಿಂದ ಸಂತುಷ್ಟನಾಗದಿದ್ದರೆ, ಅದು ಅವನ ತಪ್ಪೆಂದು ಎಣಿಸ ಬಹುದೆ? ಆಗಲೆ ಹತ್ತು ಗಂಟೆ ಹೊಡೆಯಿತು.

**ಕಲ್ಯಾಣಮ್ಮ**:—'ಯಾರೋ ಅಲ್ಲಿ, ಅಪ್ಪಣ್ಣಾ! ಬಿಸಿ ನೀರು ತಯಾರಾದರೆ ರಾಯರನ್ನು ಸ್ನಾನಕ್ಕೆ ಕರೆಯಬಹುದಿತ್ತಲ್ಲಾ? ಯಾಕೆ ತಡ ಮಾಡುತ್ತೀ?'

**ಅಪ್ಪಣ್ಣ**:—'ಬಿಸಿ ನೀರನ್ನು ಮಾಡಿ ಯಾವಾಗಲೇ ಕಾದಿದ್ದೇನಲ್ಲಾ. ನಿನ್ನೆ ಗಾಡಿಯವ ತಡಮಾಡಿಬಿಟ್ಟ. ನನ್ನಿಂದೇನೂ ಅಡ್ಡಿ ಆಗಿಲ್ಲವಮ್ಮಾ.'

**ಕಲ್ಯಾ**:—'ಅದಕ್ಕಲ್ಲಪ್ಪಾ ನಾನು ಹೇಳಿದ್ದು, ನೋಡು, ನಿನ್ನೆ ಗಾಡಿ ತಡ ಆದ ಕಾರಣ ಅವರು ಒಂದು ದಿನ ಹೆಚ್ಚು ಕೂತುಕೊಳ್ಳುವ ಹಾಗಾಯಿತು. ಅಷ್ಟೇ. ಅವರು ಇನ್ನೂ ಹತ್ತು ದಿನ ಕೂತುಕೊಂಡರೂ ಸಂತೋಷವೇ. ಆದರೆ ನಿನ್ನೆ ಅವರಿಗೆ ಕೂತದ್ದೇ ಕೂತ ಹಾಗೆ ಆಗಲಿಲ್ಲ. ಅವರಿಗೆ ಈ ಹೊತ್ತು ಹೋಗದೆ ನಿವೃತ್ತಿ ಇಲ್ಲವೆಂತಾದ ಮೇಲೆ ನಿನ್ನೆಯ

ಹಾಗೆ ಈ ಹೊತ್ತು ಯಾಕೆ ತೊಂದರೆಯಾಗಬೇಕು? ಹಾಗಾದರೆ ಸ್ನಾನಕ್ಕೆ ಕರೆದುಬಿಡು.'

ಅಪ್ಪಣ್ಣನು ಮಡಿಪಂಚೆಯನ್ನೂ ತಂಬಿಗೆಯನ್ನೂ ಹಿಡಿದುಕೊಂಡು ಮೊಗಸಾಲೆಗೆ ಬಂದೊಡನೆಯೇ ಶ್ರೀನಾಥನಿಗೆ ಅದರರ್ಥವು ಫಕ್ಕನೆ ಗೊತ್ತಾಯಿತು. ಮೇಲಿಂದ ಮೇಲೆ ನೋಡುತ್ತಿದ್ದ ಪತ್ರಿಕೆಯನ್ನು ಮೇಜಿನ ಮೇಲೆ ಹಾಕಿ, ಬೇಗನೆ ಅಪ್ಪಣ್ಣನೊಡನೆ ಬಚ್ಚಲಮನೆಯ ಕಡೆಗೆ ಹೋದನು. ಸ್ನಾನಕ್ಕೆ ಹೆಚ್ಚು ಹೊತ್ತು ಹಿಡಿಯಲಿಲ್ಲ. ಹೊರಡುವ ನೆನಪು; ಅವಸರ. ಒದ್ದೆವಸ್ತ್ರವನ್ನೆಲ್ಲ ಅಲ್ಲಿ ಬಚ್ಚಲಕಟ್ಟೆಯ ಮೇಲೆ ಹಾಕಿ ಮಡಿವಸ್ತ್ರವನ್ನುಟ್ಟು ಕೊಂಡು ಮನೆಗೆ ಬಂದನು. ದಾಮೋದರರಾಯರ ಸ್ನಾನವೂ ಆಗಿ ಹನ್ನೊಂದೂವರೆ ಗಂಟೆಯೊಳಗೆ ಊಟವೂ ಆಯಿತು. ಶ್ರೀನಾಥನು ಹೊರಗೆ ಬಂದು ಕೈಯುಜ್ಜಿಕೊಂಡಾಗ ವಜ್ರದುಂಗುರದ ನೆನಪಾಯಿತು. ಕೈಯಲ್ಲಿಲ್ಲ! ಜಸಿವಾರವನ್ನು ಮುಟ್ಟಿ ನೋಡಿದಾಗ ಅದರಲ್ಲೂ ಇಲ್ಲ. ಎಲ್ಲಿ ಹೋಯಿತೆಂಬ ಗಾಬರಿಗೊಳಗಾದನು. ಸ್ನಾನಮಾಡುವಾಗ ಕೈಬೆರಳಿನಿಂದ ತೆಗೆದು ಕೆಳಗಿಟ್ಟ ನೆನಪಾಯಿತು. ಫಕ್ಕನೆ ಹೌಹಾರಿ ಹೋಗಿ ನೋಡುವುದು, ಅಸಭ್ಯತನವೆಂದೆಣಿಸಿ ಅತ್ತಿತ್ತ ನೋಡಿ ಏನೋ ಮರೆತು ಹೋದವನಂತೆ ನಟಿಸಿದನು. ಆಗ ದಾಮೋದರರಾಯರು, 'ಏನು, ಏನು ಬೇಕಾಯಿತು?' ಎಂದು ಕೇಳಿದರು.

**ಶ್ರೀನಾಥ:**—'ಏನೂ ಇಲ್ಲ. ಉಂಗುರವನ್ನು ಬಚ್ಚಲು ಮನೆಯಲ್ಲಿ ಮರೆತೆನೋ ಎಂಬ ಸಂದೇಹ' ಎಂದು ಮೆಲ್ಲನೆ ಹೇಳಿದನು.

ದಾಮೋದರರಾಯರು 'ಅಪ್ಪಣ್ಣಾ! ಬಚ್ಚಲು ಮನೆಯಲ್ಲಿ ಉಂಗುರ ಉಳಿದುಹೋಗಿಯದಂತಲ್ಲಪ್ಪಾ? ಅದನ್ನೀಚೆಗೆ ತೆಗೆದುಕೊಂಡು ಬಾ' ಎಂದು ಸ್ವಲ್ಪ ಗಟ್ಟಿಯಾಗಿ ಮನೆಯಾಳು ಅಪ್ಪಣ್ಣನನ್ನು ಕರೆದು ಹೇಳಿದರು.

ಅಪ್ಪಣ್ಣನು, ಅಳಿಯನು ಮಿಂದು ಬಿಟ್ಟ ಒದ್ದೆವಸ್ತ್ರಗಳನ್ನು ಒಗೆಯುವುದಕ್ಕೆ ಬಚ್ಚಲಾಚೆಗೆ ಬಾವಿಕಟ್ಟೆಗೆ ಹೋಗಿದ್ದನು. ರಾಯರು ಕರೆದುದಕ್ಕೆ ಉತ್ತರ ಬರಲಿಲ್ಲ. ಕಿರುವಾಗಿಲಿನಿಂದ ಕಲ್ಯಾಣಮ್ಮನು, ವಸ್ತ್ರಒಗೆಯುತಿದ್ದ ಅಪ್ಪಣ್ಣನಿಗೆ ರಾಯರು ಕರೆದುದು ಕೇಳಿಸಲಿಲ್ಲವೆಂದು ನೆನಸಿ ಗಟ್ಟಿಯಾಗಿ

'ಅಪ್ಪಣ್ಣಾ! ರಾಯರು ಕರೆದದ್ದು ಕೇಳಿಸಲಿಲ್ಲೇನೋ?' ಎಂದು ಕೇಳಿದಳು. ಅಪ್ಪಣ್ಣನ ಉತ್ತರವಿಲ್ಲ. 'ಅಪ್ಪಣ್ಣನು ಅಲ್ಲಿ ಇಲ್ಲವೆಂತ ಕಾಣುತ್ತದಲ್ಲ' ಎಂದು ಹೇಳಿಕೊಂಡು ಕಲ್ಯಾಣಮ್ಮನು ಸ್ವತಃ ಬಚ್ಚಲು ಮನೆಯ ಕಡೆಗೆ ಹೋದಳು. ಮೊದಲು ಬಚ್ಚಲುಕಟ್ಟೆಯ ಸುತ್ತುಮುತ್ತಲೂ ಉಂಗುರವನ್ನು ಹುಡುಕಿ ನೋಡಿದಳು. ಅಲ್ಲಿ ಉಂಗುರವಿದ್ದಿಲ್ಲ. ಹೊರಗೆ ಬಂದು ಬಾವಿಯ ಕಟ್ಟೆಯ ಕಡೆಗೆ ನೋಡಿದರೆ ಅಲ್ಲಿ ಅಪ್ಪಣ್ಣನೂ ಇರಲಿಲ್ಲ. ಸಾಬೂನು ತಾಗಿಸಿದ ವಸ್ತ್ರದ ಮುದ್ದೆಯೊಂದು ಕಲ್ಲಮೇಲಿತ್ತು. ಒಗೆದು ಹಿಂಡಿದ ಒಂದೆರಡು ವಸ್ತ್ರಗಳು ಅಲ್ಲಿಯೇ ಒಂದು ಸರಿಗೆಯ ಮೇಲೆ ಬಿಸಿಲಿಗೆ ಆರಿಸಲ್ಪಟ್ಟಿದ್ದುವು. ಅಪ್ಪಣ್ಣನನ್ನು ಅಲ್ಲಿ ಕಾಣದೆ ಕಲ್ಯಾಣಮ್ಮನು ಸ್ವಲ್ಪ ದಿಗಿಲಿನಿಂದ ಬೇಗನೆ ಒಳಗೆ ಬಂದು 'ಅಪ್ಪಣ್ಣ ಅಲ್ಲಿ ಕಾಣುವುದಿಲ್ಲವಲ್ಲ' ಎಂದು ರಾಯರೊಡನೆ ಹೇಳಿದಳು. ರಾಯರಿಗೆ ಕೊಂಚ ರೇಗಿತು. 'ನೀನಾದರೂ ಹೋಗಿ ಆ ಉಂಗುರವನ್ನು ತೆಗೆದುಕೊಂಡು ಬಾರೇ!' ಎಂದು ರಾಯರು ಹೇಳಿದರು. ಅದಕ್ಕೆ ಕಲ್ಯಾಣಮ್ಮನು 'ಬಚ್ಚಲಕಟ್ಟೆಯ ಮೇಲೆ ಹುಡುಕಿದೆ, ಅಲ್ಲಿ ಇಲ್ಲವಷ್ಟೆ' ಎಂದು ಹೇಳಿದೊಡನೆ ದಾಮೋದರರಾಯರು ಫಕ್ಕನೆ 'ಅರೆ!' ಎಂಬ ಉದ್ಗಾರವೆತ್ತಿ, ಕುರ್ಚಿಯಿಂದೆದ್ದು, ಉಂಗುರವನ್ನಿಟ್ಟಿರುವ ಜಾಗವನ್ನು ತೋರಿಸುವುದಕ್ಕೆ ಶ್ರೀನಾಥನನ್ನು ಒಟ್ಟಿಗೆ ಕರೆದುಕೊಂಡು, ಸ್ವತಃ ಬಚ್ಚಲ ಮನೆಯ ಕಡೆಗೆ ಹೋದರು. ಶ್ರೀನಾಥನಿಗೆ ಸ್ವಲ್ಪ ಮನಸ್ಸಿನಲ್ಲಿ ಸಂಕೋಚವಾಯಿತು. ಬಹುಶಃ ಅಲ್ಲಿ ಉಂಗುರವಿಲ್ಲದಿದ್ದರೆ, ಇನ್ನು ಏನೇನು ಗಲಾಟೆಯುಂಟಾಗಬಹುದೋ ಎಂದು ಅವನಿಗೆ ತೋರಿತು. ಬಚ್ಚಲಕಟ್ಟೆಯ ಮೇಲಿದ್ದ ವಸ್ತ್ರದ ಮೇಲೆ ಉಂಗುರವನ್ನು ತೆಗೆದು ಇಟ್ಟಿರುವುದು ಅವನಿಗೆ ಚೆನ್ನಾಗಿ ನೆನಪಿತ್ತು. ಅಲ್ಲಿ ಹೋಗಿ ಅದನ್ನಿಟ್ಟ ಸ್ಥಳವನ್ನು ನೋಡಿದರೆ ಅಲ್ಲಿ ವಸ್ತ್ರಗಳೇ ಇರಲಿಲ್ಲ. ಅಪ್ಪಣ್ಣನನ್ನು ಕಾಣದಿರುವುದರಿಂದ ರಾಯರ ಮನಸ್ಸು ಸಂಶಯಗ್ರಸ್ತವಾಯಿತು. ಅಲ್ಲಿ ನಿಂತು ಒಮ್ಮೆ ಅಪ್ಪಣ್ಣನನ್ನು ಕರೆದರು. ಉತ್ತರ ಬರಲಿಲ್ಲ. ಮನಸ್ಸಿನ ಗಲಿಬಿಲಿಯು ಇಮ್ಮಡಿಯಾಯಿತು. ಸ್ವಲ್ಪ ಹೊತ್ತು ಆಲೋಚಿಸಿ ಅಲ್ಲಿ ಇಲ್ಲಿ ಹುಡುಕಿ ಹತ್ತು ಮಿನಿಟು ಕಳೆಯಿತು. ರಾಯರು ಮನೆಗೆ ಬಂದು ಶ್ರೀನಾಥನೊಡನೆ ಆಲೋಚಿಸತೊಡಗಿದರು. ರಾಯರು—'ದೊಡ್ಡ ಅವಸ್ಥೆಯಾಯಿ

ತಪ್ಪೇ ಇದು. ಆ ತೊತ್ತಿನ ಮಗ ಅಪ್ಪಣ್ಣನು ಕಾಣುವುದಿಲ್ಲವಲ್ಲ. ಅಲ್ಲಿ ಇಟ್ಟ ಉಂಗುರ ಮತ್ತೆ ಎಲ್ಲಿಗೆ ಹೋದೀತು?' ಎಂದು ಬಹುಶಃ ಅಪ್ಪಣ್ಣನೇ ಉಂಗುರವನ್ನು ಕದ್ದು ಎಲ್ಲಿಯೋ ಅಡಗಿಸಿಡುವುದಕ್ಕಾಗಿ ಓಡಿ ಹೋಗಿರಬಹುದೆಂಬ ಧ್ವನಿ ತೋರುವಂತೆ ಹೇಳಿದರು. ಶ್ರೀನಾಥನು—'ಹೂಂ—ಅದೇನೂ ದೊಡ್ಡದಲ್ಲ. ಎಲ್ಲಿ ಹೋಯಿತೋ ಏನೋ. ಗಂಟೆ ಎಷ್ಟಾಯಿತೀಗ?' ಎಂದು ಕೈಗಡಿಯಾರದ ಕಡೆಗೆ ನೋಡಿ, ಉಂಗುರ ಹೋದರೆ ಹೋಗಲಿ, ತನಗೀಗ ಹೊರಡದೆ ತೀರದೆಂಬ ಅಭಿಪ್ರಾಯವನ್ನು ಸೂಚಿಸುವಂತೆ ಹೇಳಿದನು. ರಾಯರು ಶ್ರೀನಾಥನ ಮನಸ್ಸಿನಲ್ಲಿರುವುದನ್ನು ಅವನು ವಾಚ್ಯವಾಗಿ ಹೇಳದಿದ್ದರೂ ಅವನು ಹೇಳಿದಂತೆಯೇ ತಿಳಿದು, 'ಹಾಗಲ್ಲ ನೋಡು. ಈಗ ಉಂಗುರ ಹೋದರೆ ಚಿಂತೆ ಇಲ್ಲ. ಒಂದು ನೂರೈವತ್ತು ರೂಪಾಯಿ ಹೋಯಿತೆಂದು ತಿಳಿಯಬಹುದು. ಈಗ ಹಾಗಿರುವುದು ತಯಾರಾದುದೇ ನಾಲ್ಕೈದು ಉಂಟು. ಹೋದರೆ ಹೋಗಲಿ, ಕರಕರೆ ಇಲ್ಲ. ಎಲ್ಲಿಗೆ ಹೋಯಿತೆಂದು ತಿಳಿಯಬೇಕೋ ಬೇಡವೋ? ಅಂತೂ ಈಗ ನೀನು ಹೊರಡುವ ಮಾತನ್ನು ನಿಲ್ಲಿಸಬೇಕಾಗುತ್ತದೆ. ನಾಳೆ ಮಧ್ಯಾಹ್ನದ ರೈಲಿಗೆ ಹೊರಟುಹೋಗು' ಎಂದರು.

**ಶ್ರೀನಾಥ:**—'ಒಂದು ಏಳೆಂಟು ದಿನವಾಯಿತು. ಇಂದು ಹೋಗದೆ ನಿರ್ವಾಹವಿಲ್ಲ. ಅದನ್ನು ನೀವು ಹುಡುಕಿಸಿ ನೋಡಿ; ಸಿಕ್ಕಿದರಾಯಿತು' ಎಂದು ಹೇಳಿ, ಮಾತಿನಿಂದ ಹೇಳಿದುದಕ್ಕಿಂತ ಹೆಚ್ಚು ಸ್ವರದಿಂದಲೂ ಮುಖಭಾವದಿಂದಲೂ ತನಗೆ ಇಂದೇ ಹೊರಡದೆ ಉಪಾಯವಿಲ್ಲವೆಂಬ ಅಭಿಪ್ರಾಯವನ್ನು ತಿಳಿಸಿದನು.

**ರಾಯರು:**—'ಹಾಗಲ್ಲಪ್ಪಾ, ಹೇಗೂ ಆಯಿತು; ಇನ್ನೊಂದು ದಿನ ವಷ್ಟೇ. ಅದು ಸಿಕ್ಕಿದರೆ ಕಾಣುತ್ತದೆ, ಇಲ್ಲವಾದರೆ ಹೋಗಲಿ. ಅದಕ್ಕೆ ಬೇಕಾಗಿ ಅಲ್ಲ, ನೀನು ಈ ಹೊತ್ತು ನಿಲ್ಲು. ನಾನು ಹೇಳುತ್ತೇನೆ' ಎಂದು ಒತ್ತಾಯದಿಂದ ಹೇಳಿ ನಿಲ್ಲಿಸುವುದರೊಳಗೆ ಹೊಸ್ತಿಲ ಕಡೆಯಲ್ಲಿ ಆತು ನಿಂತಿದ್ದ ಕಲ್ಯಾಣಮ್ಮನು 'ಆದದ್ದಾಯಿತು. ಇಂದೊಂದು ದಿನವಷ್ಟೇ. ನಾಳೆ ಹೋಗಿ ಬಿಡು' ಎಂದು ಮೃದುವಾಗಿ ಹೇಳಿದಳು. ಶ್ರೀನಾಥನಿಗೆ ಮಾವನ ಮನೆಯ ವಾಸವನ್ನು ಒಂದು ದಿನ ಮುಂದುವರಿಸುವುದು ಅಹಿತ

ವೆಂದು ತೋರಲಿಲ್ಲ. ಆದರೂ ಎಷ್ಟು ದಿನ ಕುಳಿತಿರುವುದೆಂಬ ಒಂದು ಬಗೆಯ ನಾಚುಗೆಯಿಂದ ಮಾತ್ರ ಅವನು, ಹೊರಡಬೇಕೆಂದು ದಿನೇ ದಿನೇ ಹೇಳುತಿರುವುದು. ಹೊಸ ಅಳಿಯಂದಿರ ಸ್ಥಿತಿಯೆಲ್ಲ ಹೀಗೆಯೇ. ಮಾವನ ಮನೆಯಲ್ಲಿ ಒಂದು ದಿನ ಹೆಚ್ಚು ನಿಲ್ಲಬಾರದೆಂಬ ಮನಸ್ಸಲ್ಲ; ಹೆಚ್ಚು ದಿನ ನಿಂತರೆ ಬೇರೆಯವರು ಏನು ಗ್ರಹಿಸುವರೋ ಎಂಬ ಸಂಕೋಚ. ಆದರೆ ಇಂದಿನ ಪರಿಸ್ಥಿತಿಯೇ ಬೇರೆ; ಆ ಮೇಲೆ ಶ್ರೀನಾಥನಿಗೆ ದಾಕ್ಷಿಣ್ಯವೆಂದರೆ ಬಹಳ. ಹಾಗೂ ಹೀಗೂ ಅಂದು ಹೊರಡುವ ಮಾತು ನಿಂತಿತು. ಇಷ್ಟೆಲ್ಲ ನಡೆದಾಗ ಕಾಲು ಘಂಟೆ ಕಳೆಯಿತು. ಅಪ್ಪಣ್ಣನು ಇನ್ನೂ ಕಾಣದಿರುವುದರಿಂದ, ಅವನು ಉಂಗುರವನ್ನು ಹಿಡಿದುಕೊಂಡು, ಎಲ್ಲಿಯೋ ಓಡಿಹೋಗಿರಬೇಕೆಂದೇ ರಾಯರ ನಿರ್ಧಾರ; ಮುಂದೇನು ಮಾಡಬೇಕೆಂಬ ಗಾಢ ವಿಚಾರ.

ಅಷ್ಟರಲ್ಲಿ 'ತಟ್, ತಟ್' ಎಂದು ಭಾವಿಯ ಕಡೆಯಿಂದ ವಸ್ತ್ರ ಒಗೆಯುವ ಸದ್ದು ಕೇಳಿಸಿತು. 'ಅಪ್ಪಣ್ಣಾ!' ಎಂದು ರಾಯರೂ ಕಲ್ಯಾಣಮ್ಮನೂ ಕರೆಯುವುದು ಒಟ್ಟೊಟ್ಟಿಗೆ ಆಗಿ ಹೋಯಿತು. ಒಮ್ಮೆ ಕರೆದುದು ಅವನಿಗೆ ಕೇಳಿಸಲಿಲ್ಲ; ಕಲ್ಯಾಣಮ್ಮನು ಎರಡು ಮೂರು ಸಲ ಬೆನ್ನು ಬೆನ್ನಿಗೆ ಕರೆಯುವುದನ್ನು ಕೇಳಿ, ಓಡಿ ಬಂದನು. ಮೈಯಲ್ಲಿ ಬೆವರು ಇನ್ನೂ ಇಳಿಯುತಿತ್ತು; ಸೊಂಟದಲ್ಲಿ ಕಚ್ಚೆ ಬಿಗಿದು ಉಟ್ಟಿರುವ ಅರ್ಧ ಒದ್ದೆಯಾದ ಅವನ ಬಟ್ಟೆಯಲ್ಲಿ ತುಂಬಾ ಮಣ್ಣು ತಗಲಿಕೊಂಡಿದ್ದಿತು. ಯಾವಾಗಲೂ ತಿಳಿಯಾಗಿದ್ದ ಕಲ್ಯಾಣಮ್ಮನ ಮುಖದಲ್ಲಿ ಒಂದು ಬಗೆಯ ತಿರಸ್ಕಾರದ ಚಿಹ್ನೆ ಇರುವುದನ್ನೂ ತೀಕ್ಷ್ಣದೃಷ್ಟಿಯಿಂದ ತನ್ನ ಕಡೆಗೆ ದುರದುರನೆ ನೋಡುವುದನ್ನೂ ನೋಡಿ ಅಪ್ಪಣ್ಣನ ಮನಸ್ಸಿನಲ್ಲಿ, ಏನೋ ಕೆಟ್ಟಿರುವುದೆಂದು ತೋರಿತು. ಆತನು ಸಮೀಪಕ್ಕೆ ಬರುವ ಮೊದಲೆ 'ಇಷ್ಟು ಹೊತ್ತು ಎಲ್ಲಿಗೆ ಹೋಗಿದ್ದೀ? ಕರೆದು ಕರೆದು ಹದವಾಗಿ ಬಿಟ್ಟಿದ್ದೇವಲ್ಲ. ಅಗೋ, ರಾಯರು ಕರೆಯುತ್ತಾರೆ. ಯಾಕೆಂತ ಕೇಳು' ಎಂದು ಕಲ್ಯಾಣಮ್ಮನು ನಿಷ್ಠುರವಾಗಿ ಹೇಳಿದಳು. ಅಪ್ಪಣ್ಣನು 'ಅಮ್ಮಾ' ಎಂದು ತನ್ನ ನಿಜಸ್ಥಿತಿಯನ್ನು ವಿವರಿಸಿ ಹೇಳಿಕೊಳ್ಳುವ ಮೊದಲು ಕಲ್ಯಾಣಮ್ಮನು ಒಳಗೆ ಹೋಗಿ ಹೊರಚಾವಡಿಯಲ್ಲಿದ್ದ ರಾಯರೊಡನೆ, ಅಪ್ಪಣ್ಣನು ಬಂದಿರುವನೆಂದು ತಿಳಿಸಿದಳು.

**ರಾಯರು**:—'ಎಲೋ!.....ಎಲ್ಲಿ ನಿನ್ನಪ್ಪನ ಮನೆಗೆ ಹೋಗಿದ್ದಿಯಾ ಇಷ್ಟು ಹೊತ್ತು? ನಿಜವಾಗಿ ಹೇಳು ಕಳ್ಳಾ!' ಎಂದು ತಲೆಯನ್ನು ತೂನೆದು, ಕಣ್ಣು ಕೆರಳಿಸಿ ಬಹಳ ಜಬಬಿನಿಂದ ಕೇಳಿದರು. ಪ್ರಶಾಂತವಾದ ವಾತಾವರಣವು ಕ್ಷಣಕಾಲದಲ್ಲಿಯೇ ಮಾರ್ಪಟ್ಟು ಗುಡುಗುಮಿಂಚೂ ಒಡನೆಯೇ ಜಡಿಮಳೆಯೂ ಸುರಿಯುವ್ರಪರಿಂದ ಸ್ಥಗಿತಗೊಂಡ ದಾರಿಗನಂತೆ ಅಪ್ಪಣ್ಣನಿಗೆ ರಾಯರ ಮಾತಿನ ಅರ್ಥವಾಗದೆ ದಿಕ್ಕು ತೋಚದಾಯಿತು. ಅಗತ್ಯ ಕೆಲಸವೇನಾದರೂ ಇದ್ದಿದ್ದರೆ ಅವನನ್ನು ರಾಯರು ಕರೆದಿರಬಹುದು. ಆದರೆ ಕಾರ್ಯಾಂತರದಿಂದ ಆಗ ಅವನು ಅಲ್ಲಿ ಇಲ್ಲದೆ ಹೋದರೆ, ಅವನ ಮೇಲೆ ಹೀಗೆ ಸಿಟ್ಟುಗೊಳ್ಳಲವಶ್ಯವಿರಲಿಲ್ಲ. ಹಾಗೂ, ಸಿಟ್ಟುಗೊಂಡಿದ್ದರೂ ಆ ಕುತ್ಸಿತ ನೋಟ, ಆರೋಪಣೆಯ ಪೀಠಿಕೆಯಂತೆ ಆ ಒಂದು ಬಗೆಯ ಹಂಗಿಸುವ ಮಾತು, ಮೇಲಾಗಿ ಎಲ್ಲರಿಗೂ ಅವನ ಮೇಲಿರುವ ತಿರಸ್ಕಾರದೃಷ್ಟಿ,— ಇದನ್ನೆಲ್ಲ ನೋಡಿ ಅಪ್ಪಣ್ಣನಿಗೆ ದಿಗಿಲು ಮತ್ತಷ್ಟು ಹೆಚ್ಚಿತು. ರಾಯರ ದೃಷ್ಟಿಯ ಕಠೋರತೆಯನ್ನು ಕಂಡಾಗಲೇ ಅಪ್ಪಣ್ಣನ ಕೈಯು ತನ್ನಿಂದ ತಾನೇ ಜೋಡಿಕೊಂಡಿತು; ಮೈಯಲ್ಲಿ ನಡುಕವುಂಟಾಯಿತು. ಸ್ವಲ್ಪ ಬಾಗಿದವನಾಗಿ 'ಬುದ್ಧೀ! ಒಂದು ಕಳ್ಳ ಎತ್ತನ್ನು ಓಡಿಸಿಕೊಂಡು ಹೋದೆ ಬುದ್ಧೀ' ಎಂದು ಬಹು ದೈನ್ಯದಿಂದ ಮೆಲ್ಲನೆ ಹೇಳಿದನು.

'ಥೂ ಕಳ್ಳ! ಸುಳ್ಳು ಹೇಳುತ್ತೀಯಾ? ನೀನೇ ಕಳ್ಳ. ಆ ಮೇಲೆ ಕಳ್ಳ ಎತ್ತನ್ನು ಓಡಿಸಿಕೊಂಡು ಹೋಗಿದ್ದಿ ನೀನು. ಆ ಉಂಗುರವನ್ನು ಎಲ್ಲಿ ಇಟ್ಟುಬಂದಿದ್ದಿ ಎಂದು ನಿಜವಾಗಿ ಹೇಳು. ಇಲ್ಲದಿದ್ದರೆ ನೋಡು. ನಿನ್ನ ಬೆನ್ನಿನ ಚರ್ಮ ಉಳಿಯುವಂತಿಲ್ಲ.' ಅಪ್ಪಣ್ಣನ ಕಣ್ಣಿನಿಂದ ನೀರು ದರದರನೆ ಸುರಿಯತೊಡಗಿತು. ಕಂಠದಿಂದ ಸ್ವರವೇ ಹೊರಡದು. ಆದರೂ ಕಟ್ಟಿಕಟ್ಟಿ 'ಎಂತ ಉಂಗುರ ಬುದ್ಧೀ! ನಾನು ನೋಡಲೇ ಇಲ್ಲಲ್ಲ!' ಎಂದು ಮತ್ತಷ್ಟು ದೈನ್ಯದಿಂದ ಇನ್ನಷ್ಟು ಬಾಗಿಕೊಂಡು ಕೈತಗ್ಗಿಸಿ ಹೇಳಿಕೊಂಡನು. ಶ್ರೀನಾಥನಿಗೆ ಅಪ್ಪಣ್ಣನ ಮುಖಸ್ಥಿತಿಯನ್ನು ನೋಡಿ, ನಿಜವಾಗಿಯೂ ಅವನಿಗೆ ಒಂದೂ ಗೊತ್ತಿರಲಿಕ್ಕಿಲ್ಲವೆಂದು ತೋರಿತು. ರಾಯರಿಗೆ ಅವನ ಮೇಲಣ ಸಂಶಯವು ಮತ್ತಷ್ಟು ಹೆಚ್ಚಾಯಿತು.

'ನಿನ್ನ ಕವಡು ವಿದ್ಯೆ ಎಲ್ಲವನ್ನೂ ನಾನು ಬಲ್ಲೆ. ಒಳ್ಳೆಯ ಮಾತಿನಿಂದ ತಂದುಕೊಟ್ಟೆಯೆಂದರೆ ಸರಿ. ಇಲ್ಲದಿದ್ದರೆ ಜಾಗ್ರತೆ ನೋಡಿಕೊ' ಎಂದು ರಾಯರು ಕುಳಿತಲ್ಲಿಂದ ಎದ್ದರು. ಶ್ರೀನಾಥನೂ ಎದ್ದನು. ಮುಂದೆ ಏನಾಗುವುದೆಂದು ಕಲ್ಯಾಣಮ್ಮನ ಮನಸ್ಸಿಗೆ ಹತ್ತಿತು.

'ಮಂಗ! ಆಚೆಗೆ ಹೋಗು' ಎಂದು ಕಲ್ಯಾಣಮ್ಮನು ಅಪ್ಪಣ್ಣನನ್ನು ದೂರ ಹೋಗುವಂತೆ ಕೈಸನ್ನೆ ಮಾಡಿದಳು. ಅಪ್ಪಣ್ಣನು ಇನ್ನೂ ಕತ್ತಲೆಯಲ್ಲಿ ದಾರಿ ತಪ್ಪಿದವನಂತೆ ಬೆಪ್ಪಾಗಿದ್ದನು. ಎಂತಹ ಉಂಗುರ, ಎಲ್ಲಿಂದ ತರಬೇಕು, ಯಾರದೆಂಬುದೊಂದೂ ಅವನಿಗೆ ಬಗೆ ಹರಿಯಲಿಲ್ಲ. ಹಣೆಗೆ ಕೈಹಿಡಿದುಕೊಂಡು ಆಚೆಗೆ ಹೋಗಿ ಜಗಲಿಯ ತಲೆಯಲ್ಲಿ ತಲೆ ತಗ್ಗಿಸಿ ನಿಂತನು. ಶ್ರೀನಾಥನಿಗೆ ಅವನ ಮೇಲೆ ಕನಿಕರ ಹುಟ್ಟುವ ಸ್ಥಿತಿ ಬಂತು; ಈಗ ಈ ಪ್ರಸ್ತಾಪವನ್ನೆತ್ತಿ ಇನ್ನೆಂತಹ ಅನರ್ಥಕ್ಕೆ ಕಾರಣನಾಗುವೆನೋ ಎಂದು ಅವನಿಗೆ ಮತ್ತಷ್ಟು ಬೇಸರ. ಉಂಗುರವು ಕಳೆದುಹೋದ ನಷ್ಟದ ವಿಷಯದಲ್ಲಿ ಮಾವನನ್ನು ಸಮಾಧಾನಪಡಿಸುವುದೇನೂ ಶ್ರೀನಾಥನಿಗೆ ಕಷ್ಟವೆನಿಸಲಿಲ್ಲ. ಆದರೆ ಅದು ಏನಾಯಿತೆಂದು ತಿಳಿಯಬೇಕೆಂಬ ಹಠವು ರಾಯರಲ್ಲಿ ಪ್ರಬಲವಾಗಿತ್ತು. 'ಉಂಗುರ ಹೋದರೆ ಹೋಗಲಿ. ಹತ್ತು ಅಂಥಾದನ್ನು ಸಂಜೆಯಾಗುವುದರೊಳಗೆ ತರಿಸುವೆನು. ಅದಕ್ಕಲ್ಲ. ಇಂಥಾ ಕಳ್ಳರನ್ನು ಮನೆಯಲ್ಲಿಟ್ಟುಕೊಂಡರೆ ಹೇಗೆ? ಕಣ್ಣ ಗೊಂಬೆಯನ್ನು ಕದ್ದುಕೊಂಡಾರಲ್ಲ ಇವರು. ನಾಳೆ ಕಪಾಟಿಗೆ ಗನ್ನ ಹಾಕಿದರೆ........ಇಂಥವರಿಗೆ ಬುದ್ಧಿಕಲಿಸದೆ ಬಿಟ್ಟರಾಗುತ್ತದೆಯೇ' ಎಂಬುದೇ ಅವರ ಮಾತು.

'ಅವನು ಈ ವರೆಗೆ ಏನಾದರೂ ಹೀಗೆ ಕಳವುಮಾಡಿದ್ದುಂಟೋ?' ಎಂದು ಶ್ರೀನಾಥನು ಕೇಳಿದನು. 'ಹಾಗೆ ಮಾಡಿದ್ದರೆ ಅವನನ್ನು ಇಂದಿನ ತನಕ ಇಟ್ಟುಕೊಳ್ಳಲಿಕ್ಕಿತ್ತೇ? ಅವನಿಗೆ ಸಲಿಗೆ ಹೆಚ್ಚಾಯಿತು. ಸಲಿಗೆ ಕೊಟ್ಟ ನಾಯಿ ಮೊಸಲು ನೆಕ್ಕೀತು ಎಂತ ಈಗ ತಲೆ ಹತ್ತಿದ್ದಾನೆ. ಪುಣ್ಯ, ಇಷ್ಟರಲ್ಲೇ ತೀರಿತಲ್ಲ ಅವನ ತಲೆ ಬರಪ' ಎಂದು ರಾಯರು ಅವನ ಮೇಲಣ ಆರೋಪಣೆಯನ್ನು ಬಲಪಡಿಸುತ್ತ ಉತ್ತರವಿತ್ತರು. ಮತ್ತೂ ಅವರೊಳಗೆ ಏನೇನೋ ಮಾತು ನಡೆಯಿತು. ಶ್ರೀನಾಥನಿಗೆ ಏನು ಹೇಳಬೇಕೆಂದು ತೋರಲಿಲ್ಲ. ಹೇಗೂ ತನ್ನಿಂದಾಗಿ, ತಾನು ಉಂಗುರವನ್ನು ಕಳೆದುಕೊಂಡಿರು

ವುದಕ್ಕಾಗಿ ಅಪ್ಪಣ್ಣನಿಗೆ ತೊಂದರೆಯಾಗದಂತೆ ನೋಡಿಕೊಳ್ಳುವೆನೆಂದು ಮನಸ್ಸಿನೊಳಗೆ ನಿಶ್ಚಯಿಸಿಕೊಂಡನು.

೨.

ರಾಯರು 'ನಾನು ಫಕ್ಕನೆ ಬಂದೆ' ಎಂದು ಹೇಳಿ ಯಥಾ ಪ್ರಕಾರ ಹೊರಗೆ ಹೋಗುವ ಉಡುಪನ್ನು ಉಟ್ಟುಕೊಂಡು ಶ್ರೀನಾಥನಿಗೋಸ್ಕರ ಬಂದಿದ್ದ ಗಾಡಿಯಲ್ಲಿ ಕುಳಿತು ಹೊರಟುಹೋದರು. ಅಪ್ಪಣ್ಣನು ಅಲ್ಲಿಯೇ ನಿಂತಿದ್ದನು. ಕಲ್ಯಾಣಮ್ಮನು ಅವನನ್ನು ಈಚೆಗೆ ಕರೆದು 'ನಿಜವಾಗಿ ಹೇಳು. ಇಲ್ಲದಿದ್ದರೆ ಸಾಯುತ್ತಿ ನೀನು. ರಾಯರು (ಶ್ರೀನಾಥನು) ಬಚ್ಚಲು ಕಟ್ಟೆಯಲ್ಲಿ ತೊಳೆಯುವುದಕ್ಕಿಟ್ಟಿದ್ದ ವಸ್ತ್ರದ ಮೇಲೆ ವಜ್ರದುಂಗುರವನ್ನು ಮರೆತು ಬಂದಿದ್ದರಂತಲ್ಲ. ಅದು ಎಲ್ಲಿ ಹೋಯಿತು? ಕರೆಯುವಾಗ ಅಷ್ಟು ಹೊತ್ತು ನೀನು ಹೋದದ್ದೆಲ್ಲಿ? ಹೇಳು. ಸಾಯಬೇಡ. ಒಂದು ಸಾರಿ ಇದ್ದದ್ದನ್ನು ಹೇಳಿಬಿಡು.' ಎಂದು ಉಪಚಾರದೊಡನೆ ಮೃದುವಾಗಿ ಹೇಳಿದಳು.

ಅಪ್ಪಣ್ಣನು, 'ಅಯ್ಯೋಯ್ಯೋ! ರಾಯರ ಉಂಗುರವನ್ನು ನಾನು ನೋಡಿಯೇ ಇಲ್ಲವಲ್ಲ!' ಎಂದು ಆಶ್ಚರ್ಯಪಟ್ಟು ದೈನ್ಯದಿಂದ ಹೇಳಿದನು.

'ಹಾಗಿದ್ದರೆ ಅಲ್ಲಿಯೆ ಎಲ್ಲಿಯಾದರೂ ಬಿದ್ದಿರಬಹುದೋ ಏನೋ. ಬೇಗನೆ ಹೋಗಿ ಹುಡುಕಿನೋಡು.' ಎಂದು ಶ್ರೀನಾಥನು ಹೇಳಿದಂತೆ ಅಪ್ಪಣ್ಣನು ಆ ಕಡೆಗೆ ಹೋದನು. ಕಲ್ಯಾಣಮ್ಮನೂ ಅಪ್ಪಣ್ಣನೂ ಹುಡುಕಿದರು; ಸಿಕ್ಕಲಿಲ್ಲ. ಶ್ರೀನಾಥನಿದ್ದಲ್ಲಿಗೆ ಬಂದು ಹುಡುಕಿ ಸಿಕ್ಕಲಿಲ್ಲವೆಂದು ಅಪ್ಪಣ್ಣನು ತಿಳಿಸಿದನು.

**ಶ್ರೀನಾಥ:**—'ಹಾಗಾದರೆ ನೀನು ಅಷ್ಟು **ಹೊತ್ತಿನ** ವರೆಗೆ ಎಲ್ಲಿ ಹೋಗಿದ್ದಿ?'

**ಅಪ್ಪಣ್ಣ:**—'ಕೇಳಬೇಕು ಬುದ್ಧೀ! ಒಂದು ಎತ್ತು ಬಂದು ಯಾವಾಗಲೂ ಉಪದ್ರಕೊಡುತ್ತಾ ಇದೆ. ಆಗ ತರಕಾರಿ ಗಿಡವನ್ನೆಲ್ಲಾ ತಿನ್ನುತಿತ್ತು. ಅಟ್ಟಿಕೊಂಡು ಹೋದೆ. ಆಚೆಯ ಹಿತ್ತಲಿನ ಬಾಳೆಯ ತೋಟಕ್ಕೆ ಹಾರಿತು. ಹೇಗಾದರೂ ಹಿಡಿದು ಅದಕ್ಕೆರಡು ಪೆಟ್ಟೇರಿಸಬೇಕೆಂದು ತೋರಿತು. ಅವರ

ಹಿಂದೆ ದರೆಯನ್ನು ಹಾರಿ ಆಚೆಗೆ ಹೋದೆ. ಹಾಗೂ ಹೀಗೂ ಅದನ್ನು ಅಟ್ಟಿ ಕೊಂಡು ಓಡಿ ಓಡಿ ಉಸಿರುಕಟ್ಟಿಹೋಯಿತು. ಆ ಎತ್ತು, ಕಡೆಗೆ ಸೀತಮ್ಮ ನವರ ಹಿತ್ತಿಲಿಂದಾಚೆಗೆ ಹಾರಿ, ಬೀದಿಯ ಕಡೆಗೆ ಓಡಿಹೋಯಿತು. ಎದೆಕಟ್ಟಿ ಹೋಗಿತ್ತು. ಸೀತಮ್ಮನೊಡನೆ ಸ್ವಲ್ಪ ಬಾಯಾರಿಕೆ ಕೇಳಿದೆ. ಮಕ್ಕಳಿಗೆ ಬಡಿಸುತಿದ್ದವರು ಸ್ವಲ್ಪ ನಿಲ್ಲು ಎಂದು ಹೇಳಿ ನೀರು ತರುವಾಗ ಕಾಲು ಘಳಿಗೆ ತಡವಾಯಿತು. ನೀರು ಕುಡಿದು ಬೇಗನೆ ಬಂದುಬಿಟ್ಟೆ. ಇಷ್ಟೇ ಅಲ್ಲದೆ ನಾನು ಬೇರೆಲ್ಲಿಗೂ ಹೋಗಿಲ್ಲ ಬುದ್ಧಿ! ಮನೆಗೆ ಕೂಡ ಹೋಗ ಲಿಲ್ಲ. ದೇವರಾಣೆ ಹೌದು.'

**ಕಲ್ಯಾಣಮ್ಮ**:—'ನೀನು ಹೇಳುವುದೆಲ್ಲ ಹೌದೆಂತಲೇ ತೋರುತ್ತದೆ. ಆದರೆ ರಾಯರ ಮನಸ್ಸು ಗಟ್ಟಿಯಾಗಿ ಹೋಗಿದೆ. ಇನ್ನೇನೆಲ್ಲಾ ಆಗು ವುದೋ ಏನೋ'—ಎಂದು ಸ್ವಲ್ಪ ಯೋಚಿಸಿ, 'ಹಾಗಾದರೆ ಆ ಉಂಗುರ ಏನಾಯಿತು? ನೆಲವೇ ನುಂಗಿ ಬಿಟ್ಟಿತೋ? ಬೇರೆ ಯಾರೂ ಆ ಕಡೆ ಸುಳಿ ಯಲೇ ಇಲ್ಲ!' ಎಂದು ಹೇಳಿಕೊಂಡಳು.

ಅಪ್ಪಣ್ಣನಿಗೆ ಏನು ಹೇಳಬೇಕೆಂದು ತೋರಲಿಲ್ಲ. ಸುಮ್ಮನೆ 'ದೇವ ರಿಗೇ ಗೊತ್ತು' ಎಂದು ಹೇಳಿ, ತನ್ನ ಕೆಲಸಕ್ಕೆ ಹೋದನು.

ಮೂರು ಗಂಟೆಯ ಸುಮಾರಿಗೆ ಪೋಲೀಸ್ ಇನ್ಸ್ಪೆಕ್ಟರೂ ಒಬ್ಬ ಪೋಲೀಸಿನವನೂ ದಾಮೋದರರಾಯರ ಮನೆಗೆ ಬಂದರು. ದಾಮೋ ದರರಾಯರು ಇನ್ನೂ ಬಂದಿರಲಿಲ್ಲ. ಪೋಲೀಸ್ ಸ್ಟೇಶನಿಗೆ ಹೋದವರು, ಇನ್ಸ್ಪೆಕ್ಟರು ಸ್ವಲ್ಪ ಕೆಲಸವಿದ್ದುದರಿಂದ ತಡೆದು ಬರುವೆನೆಂದು ಹೇಳಿ ದುದರಿಂದ ತನ್ನ ಸರಾಫಕಟ್ಟೆಯ ತನಕ ಹೋಗಿ, ಸ್ವಲ್ಪ ಅಲ್ಲಿ ಕುಳಿತು ಬರೋಣವೆಂದು ಆ ಕಡೆ ಹೋಗಿದ್ದರು. ಮನೆಯಲ್ಲಿ ಶ್ರೀನಾಥನು, ಯಾವುದೋ ಒಂದು ಪುಸ್ತಕವನ್ನು ಓದುತ್ತ ಆರಾಮುಕುರ್ಚಿಯ ಮೇಲೆ ಕುಳಿತಿದ್ದನು. ಇನ್ಸ್ಪೆಕ್ಟರನ್ನು ಕಂಡೊಡನೆ ಅವನಿಗೆಲ್ಲ ತಿಳಿಯಿತು. ಬೇಗನೆ ಎದ್ದು ಅವರಿಗೆ ಒಂದು ಕುರ್ಚಿಯನ್ನು ಮುಂದೆಮಾಡಿ, ತಾನೂ ಕುಳಿತುಕೊಂಡನು.

**ಇನ್ಸ್ಪೆಕ್ಟರು**:—'ನಿಮ್ಮದು ತಾನೆ ಉಂಗುರ ಕಾಣದೆ ಹೋಗಿರು ವುದು?'

**ಶ್ರೀನಾಥ**:—'ಹೂಂ. ಹೋದರೆ ಹೋಗಲಿ. ಕೊಂಡುಹೋದವರಿಗೆ ಪ್ರಯೋಜನವಾಗುವುದು.'

**ಇನ್ಸ್**:—'ಹಾಗೋ ನಿಮ್ಮ ಯೋಚನೆ? ಹಾಗಾದರೆ ನಿಮ್ಮ ರಾಜ್ಯದಲ್ಲಿ ಕಳ್ಳರಿಗೆ ಬಹಳ ಸುಖ.'

**ಶ್ರೀನಾಥ**:—'ಅವರಿಗೆ ಬಡತನದ ಅಸುಖವಿರುವುದರಿಂದ ತಾನೆ ಅವರು ಕಳವಿಗೆ ಕೈಹಾಕುತಿರುವುದು? ಹೊಟ್ಟೆಗಿಲ್ಲದವರ ಕಡೆಯ ಉದ್ಯೋಗ ಇದು, ಪಾಪ ಏನು ಮಾಡಿಯಾರು?'

**ಇನ್ಸ್**:—'ಹೊಟ್ಟೆಗಿಲ್ಲದವರೆಲ್ಲ ಈ ಉದ್ಯೋಗದಿಂದಲೇ ಜೀವನ ನಡೆಯಿಸಬಹುದಷ್ಟೆ? ಇನ್ನು ನ್ಯಾಯಸ್ಥಾನ ಜೈಲುಗಳೊಂದೂ ಬೇಡವೆಂದು ತೋರುತ್ತದೆ.'

**ಶ್ರೀನಾಥ**:–'ಜೈಲುಗಳಿರುವುದರಿಂದಲೇ ಜನರಲ್ಲಿ ದುರ್ನಡತೆ ಹೆಚ್ಚುವುದಕ್ಕೆ ಆಸ್ಪದವಾಗಿರುವುದು. ಬಡವರಿಗೆ ನ್ಯಾಯವಾಗಿಯಾಗಲಿ ಅನ್ಯಾಯವಾಗಿಯಾಗಲಿ ಶಿಕ್ಷೆಯಾದರೆ ಅವರ ಕುಟುಂಬವು ನಿರ್ಗತಿಕವಾಗಿ ಜೀವನೋಪಾಯವಿಲ್ಲದೆ ಕಷ್ಟಪಡುವುದು ಬೇರೆ; ಶಿಕ್ಷಿತನಿಗೆ ಇಡೀ ಲೋಕದೊಡನೆ ಮತ್ತು ತನ್ನ ಜೀವಿತದೊಡನೆ ಕೂಡ ಜುಗುಪ್ಸೆ ಹುಟ್ಟಿ ಮತ್ತಷ್ಟು ದುರ್ನಡತೆಗೆ ಮನಸ್ಸು ಮಾಡುವುದು ಬೇರೆ . . . . . . . . . .'

**ಇನ್ಸ್**:—'ನಿಮಗೇನು ಗೊತ್ತು ಸ್ವಾಮಿ! ಈ ಕಳ್ಳರನ್ನು ಹಿಡಿದು ಚೆನ್ನಾಗಿ ಹದಮಾಡಬೇಕು. ಒಮ್ಮೆ ಹದವಾದರೆ ಸಾಯುವ ತನಕ ಕಳವಿಗೆ ಮನಸ್ಸು ಹೋಗಬಾರದು. ನಮ್ಮಂಥವರು ನಿಮ್ಮ ಮಧ್ಯದಲ್ಲಿರುವ ಕಾರಣ ನಿಮ್ಮ ಹಾಗಿರುವ ಸಜ್ಜನರು ಹೀಗಿದ್ದಾರೆ. ಇಲ್ಲವಾಗಿದ್ದರೆ ಇಡೀ ಲೋಕವೇ ಅಡಿಮೇಲಾಗುತಿತ್ತು, ಬಲ್ಲಿರಾ?' ಎಂದು ಒಂದು ಬಗೆಯ ಮೇಲಾದ ಬುದ್ಧಿವಂತಿಕೆಯಿಂದ, ಒಂದು ಬಗೆಯ ಹಿಗ್ಗಿನಿಂದ ಹೇಳಿ, ಹೊರಗೆ ಬಂದು ನಿಂತಿರುವ ಗಾಡಿಯ ಕಡೆಗೆ ನೋಡಿದರು. ದಾಮೋದರರಾಯರು ಗಾಡಿಯಿಂದಿಳಿದು ಒಳಗೆ ಬಂದರು.

ಮುಂದಿನ ವಿಚಾರಣೆಯ ಕ್ರಮವು ತೊಡಗಿತು. ದಾಮೋದರರಾಯರ ಮನಸ್ಸಿನಲ್ಲಿ ಅಪ್ಪಣ್ಣನೇ ಉಂಗುರವನ್ನು ಕದ್ದಿರುವನೆಂಬ ಮಾತು

ಖಚಿತವಾಗಿತ್ತು. ಶ್ರೀನಾಥನಿಗೆ, ಅವನ ನಿರಪರಾಧದೃಷ್ಟಿಯನ್ನು ಪರಿಶೀಲಿಸಿಯೂ ಅವನ ಮಾತುಗಳನ್ನು ಕೇಳಿಯೂ ಅವನು ಕದ್ದಿರಲಿಕ್ಕಿಲ್ಲವೆಂಬ ಮಾತು ದೃಢವಾಗಿತ್ತು. ಕಲ್ಯಾಣಮ್ಮನಿಗೆ ಹಾಗೂ ಇರಬಹುದು ಹೀಗೂ ಇರಬಹುದೆಂಬ ಸಂದೇಹವಿತ್ತು. ಇನ್ಸ್ಪೆಕ್ಟರ್ ಸಾಹೇಬರಿಗೆ ಅವನು ಕಳ್ಳನಾಗಿದ್ದರೂ ಚಿಂತೆಯಿಲ್ಲ, ಅಲ್ಲದಿದ್ದರೂ ಬೇಸರವಿಲ್ಲ. ಕಳ್ಳ ನಲ್ಲದಿದ್ದರೆ ಕಳ್ಳನನ್ನಾಗಿ ಮಾಡುವುದಕ್ಕೆ ಅವರು ಬಲ್ಲರು. ಯಾವ ಬಗೆಯಲ್ಲಿ ಕೇಳಿದರೂ ಅಪ್ಪಣ್ಣನು ಗಳಗಳನೆ ಅಳುವುದೂ ನನಗೇನೂ ಗೊತ್ತಿಲ್ಲವೆಂಬುದೂ ಅಲ್ಲದೆ, ಬೇರೇನೂ ಅವನ ಬಾಯಿಯಿಂದ ಹೊರಡುತಿರಲಿಲ್ಲ. ರಾಯರ ಮನಸ್ಸಿಗೂ ಅಪ್ಪಣ್ಣನು ನಿರಪರಾಧಿಯಾಗಿದ್ದರೂ ಇರಬಹುದೆಂದು ತೋರಿತು. ಆದರೂ, ಇನ್ಸ್ಪೆಕ್ಟರು ಅವನನ್ನು ಪ್ರತ್ಯೇಕ ಕರೆದು ಹೆದರಿಸಿ ಕೇಳಿದರೆ, ಇನ್ನಾದರೂ ಹೇಳಿಬಿಡುವನೋ ಎಂಬ ಒಂದು ಸಂದೇಹ ನಿವೃತ್ತಿಗಾಗಿ ತಮ್ಮ ಅಭಿಪ್ರಾಯವನ್ನು ಇನ್ಸ್ಪೆಕ್ಟರಿಗೆ ತಿಳಿಸಿದರು. ಕೂಡಲೆ ಇನ್ಸ್ಪೆಕ್ಟರು ಸ್ವಲ್ಪ ಕೋಪದ ಚಿಹ್ನೆಯನ್ನು ಮುಖದಲ್ಲಿ ತಂದು ಕೊಂಡು ಕಣ್ಣು ಕೆರಳಿಸಿ, 'ಇವನೊಡನೆ ಒಳ್ಳೆಯುದರಲ್ಲಿ ಕೇಳಿದರಾಗದು. ಈಚೆಗೆ ಬರಲಿ ಅವನು' ಎಂದು ಕೈ ತೋರಿಸಿದರು. ಅಪ್ಪಣ್ಣನು ನಡು ನಡುಗುತ್ತ ಕೋಣೆಯೊಳಗೆ ಹೋದನು. ಇನ್ಸ್ಪೆಕ್ಟರು ಎರಡು ಕೈಗಳಿಂದಲೂ ಅವನ ಎರಡು ಕೆನ್ನೆಗಳನ್ನೂ ಹಿಡಿದು ನಾಲ್ಕು ಸಲ ಹಿಂದು ಮುಂದು ಅಲುಗಿಸಿ ಕೇಳಿದರು. ಬೂಟ್ಸನ್ನು ತೊಟ್ಟಿರುವ ಕಾಲಿನಿಂದ, ಅಪ್ಪಣ್ಣನ ಸೊಂಟಕ್ಕೆ ಹಿಂದಿನಿಂದ ನಾಲ್ಕು ಒದೆಗಳನ್ನು ಕೊಟ್ಟರು. ಅಪ್ಪಣ್ಣನು ದೊಪ್ಪನೆ ನೆಲದ ಮೇಲೆ ಬಿದ್ದನು. ಈ ದೃಶ್ಯವನ್ನು ಕುಳಿತಲ್ಲಿಂದಲೇ ನೋಡುತಿದ್ದ ಶ್ರೀನಾಥನ ಕಣ್ಣುಗಳಲ್ಲಿ ನೀರು ತುಂಬಿಕೊಂಡಿತು. ಒಂದು ನಿಟ್ಟುಸಿರನ್ನು ಬಿಟ್ಟು, ಹೇಗಾದರೂ ಅಪ್ಪಣ್ಣನನ್ನು ಕೈದುಮಾಡಿ ಕೋರ್ಟಿಗೆ ಎಳೆಯುದಂತೆ ಕಂಡಿತವಾಗಿಯೂ ನೋಡಿಕೊಳ್ಳುವೆನೆಂದು ಮನಸ್ಸಿನೊಳಗೆ ನಿರ್ಧರಿಸಿದನು. ಬಿದ್ದವನ ಕಿವಿಗಳನ್ನು ತಿರುವಿ, ಎಬ್ಬಿಸಿ, ಆಚೀಚೆಯ ದವಡೆಯ ಮೇಲೆ ನಾಲ್ಕು ನಾಲ್ಕು ಏಟುಗಳನ್ನೇರಿಸಿದರೂ ಅವನಿಂದ ಈ ಕಳವಿನ ಒಪ್ಪಿಗೆಯು ಆಗದಿರಲು, ಇನ್ಸ್ಪೆಕ್ಟರು ಹೊರಗೆ ಬಂದು, ಕೂಡಲೇ ಆವನನ್ನು ಕೈದಿಯನ್ನಾಗಿ ಸ್ಟೇಶನಿಗೆ ಒಯ್ಯುವುದಕ್ಕೆ ಅವಶ್ಯವಾದ ಕಾಗದ-

ಪತ್ರಗಳನ್ನೆಲ್ಲ ಅತ್ತಿತ್ತ ಮಗುಚತೊಡಗಿದರು. ಅಪ್ಪಣ್ಣನು ಕೋಣೆ ಯಿಂದ ಹೊರಗೆ ಬಂದಿದ್ದಾಗ ಅವನ ಅವಸ್ಥೆಯನ್ನು ನೋಡಿ ರಾಯರಿಗೂ ಕಸಿಕರ ಹುಟ್ಟಿತು.

**ರಾಯರು:**—'ಸಾಯಲಿ ಮಂಗ; ಎಲ್ಲಿಯಾದರೂ ಬದುಕಿಕೊಳ್ಳಲಿ. ಹೋದದ್ದು ಹೇಗೂ ಹೋಯಿತು. ಇವನನ್ನು ಏನು ಮಾಡಿದರೇನು? ಹೋದದ್ದು ಬರುವುದಿಲ್ಲೆಂತಾದ ಮೇಲೆ ........' ಎಂದರು.

ಇನ್ಸ್ಪೆಕ್ಟರು ರಾಯರ ಕಡೆಗೆ ನೋಡಿ ಕಣ್ಣು ಕೆರಳಿಸಿ 'ಏನನ್ನುತ್ತೀರಿ? ಕಳ್ಳನನ್ನು ಸುಮ್ಮನೆ ಬಿಡಬೇಕೆಂತಲೋ? ಎಲ್ಲ ನಿಮ್ಮ ಇಷ್ಟ ತಾನೆ. ಕೂಡಲೆ ಇವನನ್ನು ಚಾರ್ಜ್ ಮಾಡಿಬಿಡುತ್ತೇನೆ, ನೋಡಿ.' ಎಂದು ನಿಷ್ಠುರ ವಾಗಿ ಹೇಳಿದರು.

**ರಾಯರು:**—'ಸ್ವತ್ತು ದೊರೆಯದಿದ್ದರೆ ಏನು ಮಾಡುವುದು ಸ್ವಾಮಿ . . . . ?

**ಇನ್ಸ್ಪೆಕ್ಟರು:**—'ಸ್ವತ್ತು . . . . ? ನಿಮ್ಮ ಹತ್ತಿರ ಅಂಥಾ ಒಂದು ಬೇರೆ ಉಂಗುರವಿರಲಿಕ್ಕಿಲ್ಲವೇ? ಎಂಥಾ ಸರಾಫರು ನೀವು ಮತ್ತೆ? ಅವನ ಮನೆಯ ಝಡತಿ ಕಾಲದಲ್ಲಿ ಸಿಕ್ಕಿದರಾಯಿತು. ಅದರಲ್ಲಿ ನಿಮ್ಮ ಹೆಸರಿನ ಅಕ್ಷರ ಒಂದೆರಡಿದ್ದರೆ ಸುಲಭವಾಯಿತು. ಮತ್ತೇನು ಬೇಕು?'

ರಾಯರಿಗೆ ಜುಮ್ಮೆಂದಿತು. ಏನಾಗುವುದು ನೋಡೋಣವೆಂದು ಹಾರಿ ಸಿದ ಸಣ್ಣ ಕಿಡಿಯು ಈಗ ಪ್ರಬಲವಾಗಿ ಮನೆ ಸುಡುವುದಕ್ಕೆ ತೊಡಗಿತು. ಅಪ್ಪಣ್ಣನ ಮೇಲೆ ಆರೋಪಣೆಯನ್ನು ಉಂಟುಮಾಡಿ ಅವನನ್ನು ಶಿಕ್ಷೆಗೆ ಗುರಿ ಪಡಿಸುವುದು ರಾಯರಿಗೆ ಸಮ್ಮತವಾದ ಮಾತಲ್ಲ. ನಾಲ್ಕೈದು ವರ್ಷ ಗಳಿಂದ ಅಪ್ಪಣ್ಣನು ರಾಯರ ಮನೆಯಾಳಾಗಿದ್ದು ಯಾರೊಬ್ಬರ ಅವಿಶ್ವಾ ಸಕ್ಕೂ ಅವನು ಈವರೆಗೆ ಈಡಾಗಿರಲಿಲ್ಲ. ಆದರೆ ಮಾಡುವುದೇನು? ಸಂದರ್ಭವು ಕೈಮೀರಿಹೋಗಿತ್ತು. ಮುಂದಿಟ್ಟ ಹೆಜ್ಜೆಯನ್ನು ಹಿಂದೆ ಸರಿಸು ವುದು ರಾಯರ ವಶದಲ್ಲಿರಲಿಲ್ಲ. ಚಿಂತೆಯಿಲ್ಲ, ಎಲ್ಲಿಯಾದರೂ ಅಪ್ಪ ಣ್ಣನೇ ಅಪರಾಧಿಯಾಗಿದ್ದರೆ ಶಿಕ್ಷೆಯಾಗುವುದು ಕಂಡಿತವೆಂದಾಗಲಾದರೂ

ಒಪ್ಪಿಕೊಳ್ಳುವನೋ ಏನೋ ಎಂಬ ಸಂದೇಹದಿಂದ ಇನ್ಸ್ಪೆಕ್ಟರ ಹಂಚಿಕೆಯನ್ನು ಪೂರೈಸಲು, ರಾಯರು ಸಹಾಯಮಾಡಲೇ ಬೇಕಾಯಿತು.

ಶ್ರೀನಾಥನು ಈ ಅತ್ಯಾಚಾರಗಳಿಗೆಲ್ಲಾ ಮೂಕಸಾಕ್ಷಿಯಾಗಿ ಉದ್ದೇಶಹೀನದೃಷ್ಟಿಯಿಂದ ಯಾವ ಕಡೆಗೋ ನೋಡುತಿದ್ದನು. ಒಂದು ಮಾತೂ ಅವನಿಂದ ಹೊರಡಲಿಲ್ಲ. ಮನಸ್ಸಿನೊಳಗೆ ಅವನಿಗೆ ಏನೇನೋ ದೃಶ್ಯಗಳು ಕಂಡು ಕಾಣದಾದುವು. ಅಪ್ಪಣ್ಣನು ಕೈಜೋಡಿಸಿ ನ್ಯಾಯಸ್ಥಾನದ ಮುಂದೆ ನಿಂತಿರುವುದೂ, ತಾನು ಒಂದಕ್ಕೆರಡು ಕೂಡಿಸಿ ಅವನಿಗೆ ವಿರೋಧವಾಗಿ ಸಾಕ್ಷ್ಯ ನುಡಿಯುತಿರುವುದೂ, ಈ ಇಲ್ಲದ ಮಾತುಗಳನ್ನು ಕೇಳಿದ ಅಪ್ಪಣ್ಣನು ದೀನದೃಷ್ಟಿಯನ್ನು ತನ್ನ ಕಡೆಗೆ ತಿರುಗಿಸುವುದೂ ತನ್ನ ಕಣ್ಣೆದುರಿಗೆ ಕಟ್ಟಿದಂತೆ ಮನಸ್ಸಿನೊಳಗೆ ಕಂಡನು. ಅಪ್ಪಣ್ಣನ ಮೇಲಣ ಕಳವಿನ ಆರೋಪಣೆಯು ಸಿದ್ಧವಾಗಿ ನ್ಯಾಯಾಧೀಶರು ಅವನಿಗೆ ಶಿಕ್ಷೆ ವಿಧಿಸುವ ಮೊದಲು ಹೇಳುವುದೇನಿದೆ ಎಂದು ಕೇಳಿದಾಗ ಮೂಕನಂತೆ ಮೌನವಾಗಿ ತನ್ನ ಕಣ್ಣೀರಿನಿಂದಲೇ ಉತ್ತರವೀಯುವುದೂ ಶಿಕ್ಷೆ ವಿಧಿಸಿದ ಬಳಿಕ ಕೈಗೆ ಕೋಳವನ್ನು ಸೇರಿಸಿ ಅವನನ್ನು ಬಂದಿಖಾನೆಗೊಯ್ಯುವುದೂ ಪ್ರತ್ಯಕ್ಷ ನಡೆದಂತೆ ಶ್ರೀನಾಥನ ಮನೋದೃಷ್ಟಿಗೆ ಗೋಚರವಾಯಿತು. ಒಂದೆತ್ತಿಗಿಂದಾಗ ಕಳೆದುಹೋದ ವಜ್ರದುಂಗುರವು ಬಾವಿಯ ಕಟ್ಟೆಯ ಬದಿಯಲ್ಲಿ ತಂಗಿರುವ ಕೆಸರಿನ ರೊಚ್ಚಿನಲ್ಲಿ ಥಳಥಳನೆ ಹೊಳೆದಂತೆಯೂ ಅದು ಸಿಕ್ಕಿದೊಡನೆ ಅಪ್ಪಣ್ಣನ ನಿರಪರಾಧಿತ್ವವು ರಾಯರಿಗೆ ತಿಳಿದು ಮುಂದೇನು ಮಾಡುವುದಕ್ಕೂ ತೋಚದೆ ರಾಯರು ಮೂಗುಬ್ಬಸದಲ್ಲಿ ಸಂಕಟಪಡುವಂತೆಯೂ ಶ್ರೀನಾಥನ ಮನಸ್ಸಿಗೆ ಒಮ್ಮೆ ತೋರಿತು. ಒಮ್ಮೆ, ಅಪ್ಪಣ್ಣನು ಬಂದಿಖಾನೆಯಲ್ಲಿ ಕಷ್ಟಪಡುತಿರುವುದೂ ದಿನೇ ದಿನೇ ದುಃಖಿಸಿ ದುಃಖಿಸಿ ತನ್ನ ಮೇಲಣ ಅನ್ಯಾಯವನ್ನು ನೆನಸಿ ನೆನಸಿ ಕೃಶವಾಗುತಿರುವುದೂ, ಆತನ ಹೆಂಡತಿ ಮಕ್ಕಳು ಕೂಳಿಗೆ ಗತಿ ಇಲ್ಲದೆ ತಿರುಕರಂತೆ ಬೀದಿ ಬೀದಿ ಅಲೆಯುತಿರುವುದೂ ಶ್ರೀನಾಥನ ಮನಸ್ಸಿನೊಳಗಣ ನೋಟದೆದುರಲ್ಲಿ ನಲಿದಾಡಿದಂತಾಯಿತು. ತಾನೀಗ ಯಾವ ಸಮಯದಲ್ಲಿ, ಎಲ್ಲಿ, ಏನು ಮಾಡುತಿರುವೆನೆಂಬ ವಿಷಯವೇ ಶ್ರೀನಾಥನಿಗೆ ಗೋಚರವಿಲ್ಲದೆ 'ಪಾಪ! ಪಾಪ! ಅವನು ಕಳ್ಳನಲ್ಲ'ವೆಂದು ಗಟ್ಟಿಯಾಗಿ ಹೇಳಿ ತನ್ನ ಹಗಲುಗನಸಿನಿಂದ

ಎಚ್ಚತ್ತಾಗ ದಾಮೋದರರಾಯರೂ ಇನ್ಸ್ಪೆಕ್ಟರರೂ ಅಪ್ಪಣ್ಣನನ್ನು ಕರೆದು ಕೊಂಡು ಸ್ಟೇಶನಿಗೆ ಹೋಗಿದ್ದರು.

ಆ ದಿನವೆಲ್ಲಾ ಶ್ರೀನಾಥನ ಮನಸ್ಸಿಗೆ ಸಮಾಧಾನವಿರಲಿಲ್ಲ. ಸಂಜೆಗೆ ರಾಯರು ಮನೆಗೆ ಬಂದಾಗ ಅವರೊಡನೆ ಅಪ್ಪಣ್ಣನ ಗತಿ ಏನಾಯಿತೆಂದು ಕೇಳಬೇಕೆಂದೂ ಅವನಿಗೆ ತೋರಲಿಲ್ಲ. ರಾಯರು ಕೂಡ ಆಲೋಚನಾ ಪರರಾಗಿಯೇ ಇದ್ದರು. ರಾತ್ರಿಯೂಟವಾದ ಬಳಿಕ ಕಲ್ಯಾಣಮ್ಮನು ಚಪಲತೆಯನ್ನು ತಡೆಯಲಾರದೆ ಆಳಿನ ವಿಷಯವೇನಾಯಿತೆಂದು ರಾಯ ರೊಡನೆ ಕೇಳಿದಳು. 'ಏನೋ; ನನಗೇನೂ ತಿಳಿಯುವುದಿಲ್ಲ. ಈಗ ಅವನನ್ನು ಬಿಟ್ಟಿದ್ದಾರೆ. ನಾಳೆ ಹನ್ನೆರಡು ಗಂಟೆಯೊಳಗೆ ಅವನು ಒಪ್ಪಿ ಕೊಳ್ಳದಿದ್ದರೆ ಏನಾಗುವುದೋ ಗೊತ್ತಿಲ್ಲ.' ಎಂದು ರಾಯರು ಹೇಳಿದು ದನ್ನು ಶ್ರೀನಾಥನು ಕೇಳಿ 'ಒಪ್ಪಿಕೊಂಡರೆ ಅವನನ್ನು ಸುಮ್ಮನೆ ಬಿಟ್ಟುಬಿಡು ತ್ತಾರೆಯೆ' ಎಂದು ಫಕ್ಕನೆ ಪ್ರಶ್ನಿಸಿದನು.

'ಅದು ಮತ್ತೆ ನೋಡಬೇಕು. ಇನ್ಸ್ಪೆಕ್ಟರ ಇಚ್ಛೆ. ಅದು ಹೇಗಾ ದರೂ ಮಾಡಬಹುದಿತ್ತು. ಆದರೆ ಆ ಕಳ್ಳನು ಬಾಯಿಬಿಡುವುದೇ ಇಲ್ಲ ಪಷ್ಟೆ!' ಎಂದು ರಾಯರು ಉತ್ತರಪಿತ್ತರು. ಶ್ರೀನಾಥನಿಗೆ ಆ ರಾತ್ರಿ ನಿದ್ರೆ ಬರಲೊಲ್ಲದು. ಅಪ್ಪಣ್ಣನನ್ನು ಈ ಸಿಕ್ಕಿನಿಂದ ಬಿಡಿಸುವುದು ಹೇಗೆಂದು, ಅವನಿಗೆ ಎಷ್ಟು ಯೋಚಿಸಿದರೂ ಮನಸ್ಸಿಗೆ ಹೊಳೆಯದು. ಬಹಳ ಹೊತ್ತು ಯೋಚಿಸಿ ಕಡೆಗೆ ಒಂದು ನಿರ್ಧಾರವನ್ನು ಮಾಡಿಕೊಂಡನು.

ಗೋವಿಂದರಾಯನು ಆ ಊರ ಒಬ್ಬ ಪ್ರಸಿದ್ಧ ಧನಿಕನ ಮಗನು. ಅವನೂ ಶ್ರೀನಾಥನೂ ಬಹಳಕಾಲ ಸಹಪಾಠಿಗಳಾಗಿದ್ದರು. ಅವರೊಳಗೆ ಅನ್ಯೋನ್ಯ ಸ್ನೇಹವೂ ವಿಶ್ವಾಸವೂ ಪ್ರಬಲವಾಗಿದ್ದುವು. ಶ್ರೀನಾಥನು ಮರು ದಿನ ಬೆಳಗ್ಗೆ ಗೋವಿಂದರಾಯನನ್ನು ಕಂಡು ಅವನಿಂದ ನೂರೈವತ್ತು ರೂಪಾಯಿಗಳನ್ನು ಕೈಕಡವಾಗಿ ಪಡೆಕೊಂಡನು. ಪಟ್ಟಣದೊಳಗಿನ ಒಬ್ಬ ರತ್ನವ್ಯಾಪಾರಿಯಿಂದ ಆ ಬೆಲೆಗೆ ಒಂದು ವಜ್ರದ ಉಂಗುರವನ್ನು ಪಡೆದು, ಅದರಲ್ಲಿ ತನ್ನ ಕಳೆದುಹೋದ ಉಂಗುರದಲ್ಲಿದ್ದಂತೆ ಅಕ್ಷರಗಳನ್ನು ಕೊರೆ ಯಿಸಿ ತಂದು, ಅಪ್ಪಣ್ಣನ ಕೈಯಲ್ಲಿಟ್ಟನು. ಆಗಲೆ ಹತ್ತು ಗಂಟೆ ಮೀರಿ

ಹೋಗಿತ್ತು. ಹೆಚ್ಚು ಮಾತಾಡುತ್ತ ಕುಳಿತುಕೊಳ್ಳುವುದಕ್ಕೆ ಶ್ರೀನಾಥನಿಗೆ ಸಮಯವೂ ಮನಸ್ಸೂ ಎರಡೂ ಇರಲಿಲ್ಲ. ಶ್ರೀನಾಥನು ಅಪ್ಪಣ್ಣನ ಗುಡಿಸಲಿನಿಂದ ಹಿಂದಿರುಗಿದಾಗ ಅಪ್ಪಣ್ಣನ ಕೃತಜ್ಞತಾದೃಷ್ಟಿಯು ಭಾವಪೂರ್ಣವಾಗಿತ್ತು.

ಶ್ರೀನಾಥನು ಮಧ್ಯಾಹ್ನದ ರೈಲಿಗೆ ತನ್ನ ಊರಿಗೆ ಹೊರಟನು. ಹೊರಟಾಗ ಅಪ್ಪಣ್ಣನ ಸ್ಥಿತಿ ಏನಾಯಿತೆಂದು ತಂತಿಯ ಮೂಲಕ ಕೂಡಲೇ ತಿಳಿಸಬೇಕೆಂದು ಮಾವನೊಡನೆ ಹೇಳಿದ್ದನು. ಮೂರು ಗಂಟೆಗೆ ರೈಲಿಳಿದು ತನ್ನ ಮನೆಗೆ ತಲಪಿದಾಗ ಅವನ ಹೆಸರಿನ ವಿಳಾಸವಿರುವ ಒಂದು ತಂತೀಪತ್ರವು ಮೇಜಿನ ಮೇಲಿತ್ತು. ಅದರಲ್ಲಿ ಹೀಗಿತ್ತು:—

'ಉಂಗುರ ದೊರೆತಿದೆ. ಅಪ್ಪಣ್ಣನು ಹಾಗೆಯೆ ಇರುವ ಬೇರೊಂದು ಉಂಗುರವನ್ನು ತಂದು ಒಪ್ಪಿಸಿರುವನು. ಏನೆಂದು ತಿಳಿಯುವುದಿಲ್ಲ. ದಯವಿಟ್ಟು ಮರುಗಾಡಿಗೆ ಹೊರಟುಬರಬೇಕು.'

ಶ್ರೀನಾಥನಿಗೆ ಅದನ್ನು ಓದಿ ಸ್ವಲ್ಪ ಕಳವಳಕ್ಕೆಡೆಯಾದರೂ ತನ್ನ ಒಳಬಗೆಯ ಎಣಿಕೆಯೇ ಸರಿಯಾಯಿತೆಂದು ಸಮಾಧಾನವಾಯಿತು.



# ಶೇಖಿನ ವ್ಯವಸಾಯ.



'ಮಗೂ, ಎಷ್ಟು ದಿನಗಳ ತನಕ ನಿರುದ್ಯೋಗಿಯಾಗಿರಬಹುದು?'

'ಮತ್ತೇನು ಮಾಡಲಪ್ಪಾ, ನನ್ನ ಇಚ್ಛೆಯಿಂದ ನಿರುದ್ಯೋಗಿಯಾಗಿದ್ದೇನೆಯೆ?'

'ನಿನ್ನ ಇಚ್ಛೆಯಿಂದಾಗಲಿ ಬೇರೆಯವರ ಇಚ್ಛೆಯಿಂದಾಗಲಿ ಸುಮ್ಮನಿರುವುದು ಹಾನಿಕರ. ನಮಗೇನಾದರು ಹಿರಿಯರು ಮಾಡಿಟ್ಟ ಆಸ್ತಿ ಇಲ್ಲ. ಆದುದರಿಂದ ಎಲ್ಲಾದರೂ ಹೋಗಿ ಯಾವುದಾದರೊಂದು ಕೆಲಸವನ್ನು ಸಂಪಾದಿಸಿಕೊಳ್ಳು.'

'ಈ ಕಾಲದಲ್ಲಿ ಯಾವ ಕೆಲಸ ತಾನೇ ಸಿಕ್ಕೀತು?'

'ನಿನಗೆ ಆಲಸ್ಯ ಹಿಡಿದಿದೆ ಎಂದು ನನಗೆ ಚೆನ್ನಾಗಿ ತಿಳಿಯಿತು. ನನ್ನ ಜೀವ ಇರುವ ತನಕ ನೀನು ಸುಮ್ಮನಿರಬಹುದು. ನಂತರ ಏನು ಮಾಡುವಿ? ನೀನು ಬಿ. ಎ. ಪರೀಕ್ಷೆಯಲ್ಲಿ ಒಳ್ಳೆಯ ಸ್ಥಾನದಲ್ಲಿ ಉತ್ತೀರ್ಣನಾಗಿರುವಿ. ನಿನ್ನ ಜ್ಞಾನವೆಲ್ಲಾ ನಿಷ್ಫಲವೇ?'

'ಅಪ್ಪಾ, ನಿನಗೆ ಜಗತ್ತಿನ ನಿಜಸ್ಥಿತಿಯು ತಿಳಿಯದು. ಇಷ್ಟರತನಕ ನಾನು ಸುಮ್ಮನಿದ್ದೆ ಎಂದು ಎಣಿಸಿದೆಯಾ? ಸರಕಾರಿ ಆಫೀಸುಗಳಿಗೆ ನೂರಾರು ಅರ್ಜಿಗಳನ್ನು ಹಾಕಿದೆನು. ಆದರೆ ಎಲ್ಲವೂ ವ್ಯರ್ಥವಾಯಿತು; ನಾನು 'ಇತಿ ತಮ್ಮ ನಮ್ರ ಸೇವಕ' ಎಂದು ಬರೆದದ್ದೇ ಬಂತು. ಆದರೆ ನಾನು ಇನ್ನು ಇಲ್ಲಿ ನಿಲ್ಲಲಾರೆನು. ಈ ದಿನ ಸಾಯಂಕಾಲವೇ ಹೊರಡುವೆನು!'

ವ್ಯಥಿತಹೃದಯನಾದ ನಾನು ನಮ್ಮ ಹಳ್ಳಿಯ ಹತ್ತರವಿರುವ ಉಡುಪಿಗೆ ಹೊರಟೆನು. ಉಡುಪಿಯು ನನಗೆ ತೀರ ಹೊಸದಾದ ಪಟ್ಟಣವು.

ಮೊದಲನೆಯ ದಿನ ಒಂದು ಹೊಟಲಿನಲ್ಲಿ ಉಳಕೊಂಡೆನು. ಏನು ಮಾಡಲಿ? ಎಂಬ ಪ್ರಶ್ನೆಯು ನನ್ನನ್ನು ಅಡಿಗಡಿಗೆ ಬಾಧಿಸುತಿತ್ತು. ಇಡೀ ರಾತ್ರಿ ನಿದ್ರೆಯಿಲ್ಲ. ಮರುದಿನ ಬೆಳಗ್ಗೆ ಪಟ್ಟಣವನ್ನು ತುಸು ನೋಡೋಣವೆಂದು ಹೊರಟೆನು. ದಾರಿಯಲ್ಲಿ ಒಂದು ವಾಚನಾಲಯವು ತೆರೆದಿತ್ತು. ಅಲ್ಲಿ ಹೋಗಿ ಕಪಾಟುಗಳಲ್ಲಿರುವ ಪುಸ್ತಕಗಳನ್ನು ಓದಲಾರಂಭಿಸಿದೆನು. ಅಲ್ಲಿ ಅನೇಕ ಉತ್ತಮ ಪುಸ್ತಕಗಳಿದ್ದವು. ಅವುಗಳಲ್ಲಿ **'The A. B. C. of Journalism' by John French** ಎಂಬ ಪುಸ್ತಕವನ್ನು ಓದಬೇಕೆಂದು ನನ್ನ ಮನಸ್ಸಿಗೆ ಹೊಳೆಯಿತು. ವಾಚನಾಲಯದ ಅಧಿಕಾರಿಯಿಂದ ಅದನ್ನು ಪಡಕೊಂಡು ಓದಲಾರಂಭಿಸಿದೆ. ಲೇಖಕನು ತನ್ನ ಅದ್ಭುತವಾದ ಶೈಲಿಯಿಂದ ಪತ್ರಿಕೆಗಳ ಸಂಪಾದನೆಯನ್ನು ಸ್ಪಷ್ಟವಾಗಿ ವಿವರಿಸಿದ್ದನು. ಅದನ್ನು ಆಮೂಲಾಗ್ರವಾಗಿ ಓದಿದೆನು. ಮಧ್ಯಾಹ್ನದ ಊಟದ ಗೊಡವೆ ಸಹ ಇದ್ದಿಲ್ಲ. ಗ್ರಂಥಕರ್ತನು ಬರೆದಿರುವುದೇನಂದರೆ 'ಪತ್ರಿಕೆಗಳ ಸಂಪಾದನೆಯಷ್ಟು ಶ್ರೇಷ್ಠವಾದ ಕೆಲಸವು ಮತ್ತೊಂದಿರದು. ಸಂಪಾದಕನ ಲೇಖನಿಯು ಇದಿರಿನಲ್ಲಿ ಸರಕಾರದ ಖಡ್ಗ ಸಹ ಹಿಂದೆಗೆಯುವುದು. ಸಂಪಾದಕನು ತನ್ನ ವಿಚಕ್ಷಣವಾದ ಲೇಖನಿಯಿಂದ ಜನರಲ್ಲಿ ಯಾವ ಅಭಿಪ್ರಾಯವನ್ನಾದರು ಕಲ್ಪಿಸಲು ಸಮರ್ಥನು. ಆದರೆ ಅವನು ನಿಷ್ಪಕ್ಷಪಾತಿಯಾಗಿರಬೇಕು ಮತ್ತು ನಿರ್ಭೀತನಾಗಿರಬೇಕು. ಪುಕ್ಕನಾದ ಮನುಷ್ಯನು ಎಷ್ಟು ವಿದ್ವಾಂಸನಾದರೂ ಪತ್ರಿಕಾಸಂಪಾದನೆಯಲ್ಲಿ ಪಟುತ್ವವನ್ನು ಹೊಂದಲಾರನು. ಧೀರನೂ ದೂರದರ್ಶಿಯೂ ಆದ ಮನುಷ್ಯನು ಎಂಥಾ ಕಷ್ಟಗಳು ಬಂದರೂ ಅಪಜಯವನ್ನಾಗಲಿ ಅಪಯಶಸ್ಸನ್ನಾಗಲಿ ಹೊಂದಲಾರನು. ಸಂಪಾದನಕಲೆಯ ಮಹತ್ವವನ್ನು ಏನೆಂದು ವರ್ಣಿಸಲಿ?' ಈ ಮಾತುಗಳನ್ನು ಎರಡು ಮೂರು ಬಾರಿ ಓದಿಕೊಂಡೆನು. ನನ್ನ ಕುಗ್ಗಿದ ಮನಸ್ಸು ಚೇತರಿಸಿಕೊಂಡಿತು. ನಾನೂ ಒಬ್ಬ ಸಂಪಾದಕನೇಕಾಗಬಾರದು? ಕನ್ನಡದಲ್ಲಿ ನನಗೆ ಒಳ್ಳೆಯ ಅಭಿರುಚಿಯಿದ್ದುದರಿಂದ ಕನ್ನಡ ವಾಙ್ಮಯದ ಸಾಕಾದಷ್ಟು ಪರಿಚಯವಾಗಿತ್ತು. ಪತ್ರಿಕೆಯನ್ನು ಸ್ವತಃ ಹೊರಡಿಸುವುದು ಪ್ರಕೃತದಲ್ಲಿ ಅಸಾಧ್ಯವು. ಆದರೆ ಪತ್ರಿಕೆಗಳಿಗೆ ಲೇಖನಗಳನ್ನು ಕೊಟ್ಟುಕೊಟ್ಟು, ಕೊನೆಗೆ ಸಂಪಾದಕನಾಗಬಹುದಲ್ಲವೆ? ಮೊತ್ತಮೊದಲು

ಸ್ವಲ್ಪ ಕಷ್ಟವಾದರೂ ಕೊನೆಗೆ ಜೀವನನಿರ್ವಾಹವು ಸರಾಗವಾಗಿ ಆಗಬಹುದು.

ಆದರೆ ಇಂಗ್ಲೀಷ್ ಸಾಹಿತ್ಯವನ್ನು ಚೆನ್ನಾಗಿ ಅಧ್ಯಯನಮಾಡಿದುದರಿಂದ ಕನ್ನಡ ಸಾಹಿತ್ಯದ ವಿಷಯ ನನ್ನ ಅಭಿಪ್ರಾಯವೇ ಬೇರೆಯಾಗಿ ಹೋಗಿತ್ತು. ಸಾಹಿತ್ಯಾಚಾರ್ಯರ, ಶಾಸ್ತ್ರಿಗಳ ಅಭಿಪ್ರಾಯಗಳು ನನ್ನ ಮನಸ್ಸಿಗೆ ಸರಿಹೋಗುತಿರಲಿಲ್ಲ. ಕಾವ್ಯವು ಪುರಾತನ ಪದ್ಧತಿಗಳನ್ನೇ ಏಕೆ ಅನುಸರಿಸಿಕೊಂಡು ಹೋಗಬೇಕು? ಆ ಸಮಯಕ್ಕೆ ಅನುಗುಣವಾಗಿ ಆ ಪದ್ಧತಿಗಳಿದ್ದವು. ಆಧುನಿಕ ಕಾಲದಲ್ಲೂ ಅವುಗಳನ್ನವಲಂಬಿಸಿದರೆ ಕಾವ್ಯವು ಸರಿಯಾಗಿ ಪ್ರವಹಿಸದು. ನಮ್ಮ ಆಧುನಿಕಭಾವನೆಗಳನ್ನು, ಪ್ರಾಚೀನಪದ್ಧತಿಗಳನ್ನು ಅನುಸರಿಸಿ ಹೇಗೆ ತಾನೆ ಪ್ರಕಟಗೊಳಿಸಲಾದೀತು? ಮುಖ್ಯವಾದ ವಿಷಯವು ಕಾವ್ಯವು; ಪದ್ಧತಿಗಳು ಗೌಣ. ಕಾವ್ಯಕ್ಕೆ ಸರಿಯಾಗಿ ಪದ್ಧತಿಗಳನ್ನು ಮಾಡುವುದಲ್ಲದೆ ಪದ್ಧತಿಗಳಿಗೆ ಸರಿಯಾಗಿ ಕಾವ್ಯಗಳನ್ನಲ್ಲ. ಅಂತು ಕನ್ನಡ ಸಾಹಿತ್ಯದಲ್ಲಿ ನನ್ನ ಪಂಥವು ತೀರ ಹೊಸದಾಗಿದ್ದಿತು. ನನ್ನ ಲೇಖನಗಳಲ್ಲಿ ನಿರ್ಭಯವಾಗಿ ನನ್ನ ಅಭಿಪ್ರಾಯಗಳನ್ನು ಪ್ರಕಟಿಸಲು ನಿಶ್ಚಯಿಸಿದೆನು. ನಾನು ಒಬ್ಬ ಸೌಂದರ್ಯದ ಉಪಾಸಕನೇ ಆಗಿದ್ದೆನು.

ಅನೇಕ ದಿನಗಳು ಕಳೆದುಹೋದುವು. ಒಂದು ದಿನ 'ಕವಿತೆ' ಎಂಬ ಒಂದು ಲೇಖನವನ್ನು ತೆಗೆದುಕೊಂಡು ಉಡುಪಿಯ 'ಕರ್ನಾಟಕ ಸಂದೇಶ'ದ ಆಫೀಸಿಗೆ ಹೋದೆನು. ಅಲ್ಲಿಯ ಸಂಪಾದಕರು ನನ್ನ ಲೇಖನದ ಹತ್ತು ಪಂಕ್ತಿಗಳನ್ನು ಓದಿದ್ದಾರೋ ಇಲ್ಲವೊ ಅಷ್ಟರಲ್ಲಿ,—

'ಛೆ, ಛೆ! ಇವೆಂತಹ ನಿಂದ್ಯವಾದ ಭಾವನೆಗಳು! ಏನು ನಮ್ಮ ಸಾಹಿತ್ಯ ಶಾಸ್ತ್ರವೆಲ್ಲಾ ಮೂಲೆಗೆ ಹೋಯಿತೆ? ನೀನು ಕರ್ನಾಟಕ ಭಾಷೆಯಲ್ಲಿ ಸುಧಾರಣೆಯನ್ನು ಮಾಡಲು ಹೊರಡುತಿರುವಿಯಾ? ಗೊತ್ತುಂಟು ನಿಮ್ಮ ಸುಧಾರಣೆ ಏನೆಂದು. ಚತುರ್ದಶಪದಿ, ಅಷ್ಟವಿಂಶತಿಪದಿ, ಇವೇ ಅಲ್ಲವೇ'?

'ಸ್ವಾಮಿ, ಅದನ್ನು ಪೂರ್ಣ ಓದಿನೋಡಿರಿ' ಎಂದು ನಾನು ಬೇಸರದಿಂದ ಹೇಳಿಕೊಂಡೆನು. ಇಷ್ಟು ದೊಡ್ಡ ವಿದ್ವಾಂಸರು ಈ ರೀತಿಯಾಗಿ

ನುಡಿಯುವುದನ್ನು ಕಂಡು ನನಗೆ ತುಂಬಾ ಆಶ್ಚರ್ಯವೂ ಅವರ ವಿದ್ವತ್ತಿನ ಮೇಲೆ ತಿರಸ್ಕಾರವೂ ಉಂಟಾದುವು. ತುಸು ಹೊತ್ತಿನ ನಂತರ ಸಂಪಾದಕ ಮಹಾಶಯರು, 'ಇಲ್ಲ, ಇಂಥಾ ಕ್ರಾಂತಿಕಾರಿಯಾದ ಲೇಖನಗಳಿಗೆ ನಮ್ಮ ಪತ್ರಿಕೆಯಲ್ಲಿ ಎಡೆಸಿಕ್ಕಲಾರದು' ಎಂದು ಆಫೀಸಿನಿಂದ ಎಲ್ಲಿಗೋ ನಡೆದು ಬಿಟ್ಟರು. ನಾನು ಸಂತಪ್ತಹೃದಯನಾಗಿ ಮನೆಗೆ ತೆರಳಿದೆನು.

ಆ ಸಮಯದಲ್ಲಿ ಮಂಗಳೂರಿನಲ್ಲಿ 'ಕರ್ನಾಟಕ ಕೋಕಿಲ' ಎಂಬ ಒಂದು ಪ್ರಸಿದ್ಧವಾದ ಮಾಸಪತ್ರಿಕೆಯು ಹೊರಡುತಿತ್ತು. ಇಲ್ಲಿಯ ಸಂಪಾದನವಿಭಾಗದಲ್ಲಿ ಏನಾದರೂ ಕೆಲಸವು ಸಿಕ್ಕಿದರೆ ನಂತರ ಕುಟುಂಬ ವನ್ನು ಕರೆದುಕೊಂಡು ಹೋಗುವುದೆಂದು ನಿಶ್ಚಯಿಸಿ ಒಂದು ದಿನ ಮಂಗ ಳೂರಿಗೆ ಹೊರಟೆನು. 'ಕರ್ನಾಟಕ ಕೋಕಿಲ'ವೆಂದರೆ ಪ್ರಸಿದ್ಧ ಪತ್ರಿಕೆಯು. ಒಂದು ಸಮಯದಲ್ಲಿ ಇದಕ್ಕೆ ೬೦೦೦ ಚಂದಾದಾರರಾಗಿದ್ದರು. ಈಗ ಕಾರಣಾಂತರದಿಂದ ಸಂಖ್ಯೆಯು ೩೦೦೦ಕ್ಕೆ ಬಂದು ನಿಂತಿತ್ತು. ಸಂಪಾದಕ ಮಹಾಶಯರನ್ನು ಅಭಿವಂದಿಸಿ:—

'ಸ್ವಾಮಿ, ನಾನು ಒಬ್ಬ ಬಡವನು. ಇಂಗ್ಲೀಷಿನ ಮತ್ತು ಕನ್ನಡದ ಸಾಕಷ್ಟು ಜ್ಞಾನವು ಇದೆ. ಆದುದರಿಂದ ನನಗೆ ತಮ್ಮ ಸಂಪಾದನ ವಿಭಾಗ ದಲ್ಲಿ ಒಂದು ಕೆಲಸಕೊಡಬೇಕಾಗಿ ದೈನ್ಯವರಿತು ಪ್ರಾರ್ಥಿಸಿಕೊಳ್ಳುತ್ತೇನೆ. ನನ್ನ ಈ ಲೇಖನವೊಂದನ್ನು ಓದಿನೋಡಿರಿ.' ಎಂದು ಹೇಳಿದೆನು.

**ಸಂಪಾದಕ:**—ಈಗಿನ ಕಾಲದಲ್ಲಿ ವೃತ್ತಪತ್ರಿಕೆಗಳು ಮುಂಚಿನಂತೆ 'ಪೇಯಿಂಗ್' (Paying) ಅಲ್ಲ. ನಮ್ಮ ಚಂದಾದಾರರ ಸಂಖ್ಯೆಯು ಸರಿ ಅರ್ಧಕ್ಕೆ ಇಳಿದಿದೆ. ಇಂಥಾ ಸಮಯದಲ್ಲಿ ಸಂಬಳಕೊಟ್ಟು ನಿನ್ನನ್ನು ಹೇಗೆ ನಿಯಮಿಸಲಿ? ಇರಲಿ; ನಿನ್ನ ಲೇಖನವನ್ನು ನೋಡೋಣ. (**ಲೇಖನ ವನ್ನು ಓದಿಯಾದ ನಂತರ ಲಲಾಟವನ್ನು ಆಕುಂಚಿಸಿಕೊಂಡು**) ಲೇಖನವೇನೋ ಸ್ವಾರಸ್ಯವುಳ್ಳದ್ದಾಗಿದೆ. ಎಷ್ಟು ವೇತನಕ್ಕೆ ಸಂಪಾದನಕಾರ್ಯವನ್ನು ವಹಿಸಿಕೊಳ್ಳುತ್ತಿ?

**ನಾನು:**—ಕನಿಷ್ಟ ಪಕ್ಷಕ್ಕೆ ಮೂವತ್ತೈದು ರೂಪಾಯಿಗಳು ಸಿಕ್ಕ ಬೇಕು. ಇಲ್ಲದಿದ್ದರೆ ನಾನು ನನ್ನ ಕುಟುಂಬದೊಡನೆ ಈ ಮಂಗಳೂರು ನಗರದಲ್ಲಿ ಜೀವಿಸುವುದು ಹೇಗೆ?

**ಸಂಪಾದಕ**:—ನೀನು ಹೇಳುವುದೇನೋ ಸರಿ. ಆದರೆ ವೇತನವು ೨೦ ರೂಪಾಯಿಗಳಿಗಿಂತ ಹೆಚ್ಚಿಗೆ ಕೊಡಲಾಗುವುದಿಲ್ಲ. ನಮಗೆ ಕೆಲಸಗಾರರ ಅಗತ್ಯವೇ ಇದ್ದಿಲ್ಲ. ಆದರೂ ನಿನ್ನ ಪಾಂಡಿತ್ಯವನ್ನೂ ದುಸ್ಥಿತಿಯನ್ನೂ ಕಂಡು ನನಗೆ ತುಂಬಾ ಕನಿಕರ ಉಂಟಾಗಿದೆ. ನೋಡೋಣ, ಮುಂದಕ್ಕೆ ನಿನಗೆ ಹೆಚ್ಚು ಕೊಡಲಾಗುವುದು.

ಏನು ಮಾಡಲಿ! ೨೦ ರೂಪಾಯಿಗೆ ಕೆಲಸ ಮಾಡಲು ಒಪ್ಪಿದೆನು. ನನ್ನ ತಾಯಿ ಮತ್ತು ಹೆಂಡತಿಯನ್ನು ಊರಿಂದ ಕರೆದು ಒಂದು ಕಡೆಯಲ್ಲಿ ಬಿಡಾರಮಾಡಿದೆನು. ಆದರೆ ಇಪ್ಪತ್ತು ರೂಪಾಯಿಗಳಿಂದ ಮನೆ ಖರ್ಚು ಸಾಗುವುದೇ? ಸಾಲ ತೆಗೆದುಕೊಳ್ಳಲೇ ಬೇಕಾಯಿತು. ತಿಂಗಳು ತಿಂಗಳಿಗೂ ಸಾಲವು ಹೆಚ್ಚುತ್ತಾ ಹೋಯಿತು.

ಸಾಧಾರಣ ಆರು ತಿಂಗಳು ಕಳೆದುಹೋಗಿದ್ದಿರಬಹುದು. ನಾನು ಸಂಪಾದನಕಾರ್ಯವನ್ನು ವಹಿಸಿದಂದಿನಿಂದ ಎಲ್ಲಾ ಕಾರ್ಯವು ವ್ಯವಸ್ಥಿತ ರೂಪದಿಂದ ಸಾಗಲಾರಂಭಿಸಿತು. ಚಂದಾದಾರರ ಸಂಖ್ಯೆಯು ಮೂರು ಸಾವಿರದಿಂದ ನಾಲ್ಕು ಸಾವಿರಕ್ಕೇರಿತು. ಒಂದು ದಿನ ಸಂಪಾದಕ ಮಹಾಶಯರನ್ನು ಸಮೀಪಿಸಿ ನನ್ನ ಕಷ್ಟಗಳನ್ನು ಹೇಳಿಕೊಂಡೆನು. 'ಸ್ವಾಮೀ, ನಿಮ್ಮ ೨೦ ರೂಪಾಯಿಗಳಿಂದ ನನ್ನ ಜೀವನನಿರ್ವಾಹವಾಗುವುದಿಲ್ಲ. ಸಾಲ ತೆಗೆದುಕೊಂಡು ಸಾಕಾಯಿತು. ಆದುದರಿಂದ ನನ್ನ ವೇತನವನ್ನು ದಯಮಾಡಿ ಹೆಚ್ಚಿಸುವಿರಾ?'

**ಸಂಪಾದಕ**:—ಈಗ ಹೇಗೆ ತಾನೆ ಹೆಚ್ಚಿಸಲಿ? ಚಂದಾದಾರರ ಸಂಖ್ಯೆಯಂತೂ ಇದ್ದಕ್ಕಿದ್ದ ಹಾಗೆ ಇದೆ.

**ನಾನು**:—ಏಕೆ, ಸ್ವಾಮೀ? ಮೂರು ಸಾವಿರವಿದ್ದದ್ದು ನಾಲ್ಕು ಸಾವಿರವಾಗಿದೆ. ಇನ್ನೆಷ್ಟು ಹೆಚ್ಚುವುದು?

**ಸಂಪಾದಕ**:—ಅದೆಲ್ಲಿ ಸಾಕಾದೀತು? ಕನಿಷ್ಟ ಪಕ್ಷಕ್ಕೆ ೬೦೦೦ ವಾದರೂ ಆಗಬೇಕಲ್ಲವೆ?

**ನಾನು**:–ಹೇಗೂ ಇರಲಿ. ನನ್ನ ಸಂಪಾದನದಿಂದ ತಮಗೆ ತುಂಬಾ ಲಾಭವಾಗಿದೆ. ಆದುದರಿಂದ ನನ್ನ ವೇತನದಲ್ಲಿ ೧೦ ರೂಪಾಯಿ ಹೆಚ್ಚಿಸುವಿರಂತೆ.

**ಸಂಪಾದಕ:**— ಅದಾಗದು. ಹೆಚ್ಚಿಸುವದು ಈ ಸಮಯದಲ್ಲಿ ವಿಚಾರಿಸುವ ವಿಷಯವಲ್ಲ.

ಸಂಪಾದಕರ ಸ್ವಾರ್ಥವನ್ನೂ ಕಾರ್ಪಣ್ಯವನ್ನೂ ನೋಡಿ ತುಂಬ ಬೇಸರಪಟ್ಟೆನು. ಇಂಥವರ ಕೈಕೆಳಗೆ ಕೆಲಸಮಾಡುವುದು ಅನುಚಿತವೆಂದು ಭಾವಿಸಿ 'ಸ್ವಾಮೀ, ಸಂಬಳ ಹೆಚ್ಚಿಸದ ಹೊರತು ಇಲ್ಲಿ ಕೆಲಸ ಮಾಡಲಿಕ್ಕಿಲ್ಲ' ಎಂದು ಕೋಪದಿಂದ ಮನೆಗೆ ತೆರಳಿದೆನು.

ಕೋಪದಿಂದ ಕೆಲಸವನ್ನೇನೋ ಬಿಟ್ಟು ಬಂದೆನು. ಈಗ ನನ್ನ ಜೀವನಮಾರ್ಗವಾವುದು? ಒಬ್ಬನಾದರೆ ಏನೂ ಮಾಡಬಹುದು. ತಾಯಿಯನ್ನೂ ಹೆಂಡತಿಯನ್ನೂ ಕಟ್ಟಿಕೊಂಡು ಈ ಮಂಗಳೂರಿನಲ್ಲಿ ಹೇಗೆ ಜೀವನ ಮಾಡಿಕೊಳ್ಳಲಿ? ಮನೆಯ ಬಾಡಿಗೆಯನ್ನು ಕೊಡದೆ ಎರಡು ತಿಂಗಳುಗಳಾದವು. ಜೀನಸಿನ ಅಂಗಡಿಗಳಲ್ಲಿಯೂ, ಮಡಿವಾಳನಲ್ಲಿಯೂ, ಕೊನೆಗೆ ಕ್ಷೌರಿಕನಲ್ಲಿಯೂ ನನಗೆ ಸಾಲ. ಒಟ್ಟಿನ ಮೇಲೆ ಸಾಲದ ಒಂದು ಸುಳಿಯಲ್ಲಿ ನಾನು ತಿರುಗುತಿದ್ದೆನು. ಒಂದು ಅಲ್ಲದಿದ್ದರೆ ಇನ್ನೊಂದು ದಿನ ಇದು ನನ್ನನ್ನು ತಳಕ್ಕೆ ಅಪ್ಪಳಿಸದೆ ಬಿಡದು. ಆದರೂ 'ಬಂದುದೆಲ್ಲಾ ಬರಲಿ; ಗೋವಿಂದನ ದಯೆ ನಮಗಿರಲಿ' ಎಂಬ ತತ್ವವನ್ನು ದೃಢವಾಗಿ ಅವಲಂಬಿಸುತಿದ್ದ ನಾನು ಕಷ್ಟಗಳಿಗೆ ಅಂಜಲಿಲ್ಲ. ಪ್ರತಿದಿನ ಹೊಸಹೊಸ ಲೇಖನಗಳನ್ನು ಯಾ ಸಾಮಾಜಿಕ ಕಾದಂಬರಿಗಳನ್ನು ಎಡೆಬಿಡದೆ ಬರೆಯುತಿದ್ದೆನು.

ಈ ಸಮಯದಲ್ಲಿ ಧಾರವಾಡದ ಒಬ್ಬ ಧನಿಕನು 'ನನ್ನ ನಾಡು' ಎಂಬ ಮಾಸಪತ್ರಿಕೆಯನ್ನು ಹೊರಡಿಸಿದ್ದನು. ಈ ಪತ್ರಿಕೆಗೆ ಲೇಖನಗಳನ್ನು ಕಳುಹಿಸಿದರೆ ಸ್ವಲ್ಪ ಹಣ ಸಿಕ್ಕೀತೆಂದು ಭಾವಿಸಿ ಒಂದು ಒಳ್ಳೆಯ ಲೇಖನವನ್ನು ಕಳುಹಿಸಿದೆನು. ನನ್ನ ಲೇಖನಗಳೆಂದರೆ ಮಂಗಳೂರ ಪತ್ರಿಕೆಗಳಿಗೆ ತುಂಬಾ ಸಂತೋಷ. ಆದರೆ ನನಗೆ ಪ್ರತಿಫಲವನ್ನು ಕೊಡುವುದರಲ್ಲಿ ಮಾತ್ರ ಅವು ಬಹಳ ಹಿಂದೆಗೆಯುತಿದ್ದವು. ಒಂದು ವಾರದ ನಂತರ ಧಾರವಾಡದಿಂದ ಹೀಗೆಂದು ಉತ್ತರ ಬಂತು—'ತಮ್ಮ ಲೇಖನವು ಅತ್ಯುತ್ತಮವಾಗಿದೆ. ಇಂಥಾ ಲೇಖಗಳನ್ನು ಇನ್ನು ಮುಂದಕ್ಕೂ ಕೊಡುತ್ತಾ ನಮ್ಮ 'ನನ್ನ ನಾಡಿ'ನ ಸಂಪುಟಗಳನ್ನು ಅಲಂಕರಿಸಬೇಕಾಗಿ ನಾವು ಕೋರುತ್ತೇವೆ.'

ಈ ಉತ್ತರದಿಂದ ನನಗೆ ತುಂಬಾ ಸಂತೋಷವಾಯಿತು. ಯೋಗ್ಯವಾದ ಪ್ರತಿಫಲವು ಸಿಕ್ಕೀತೆಂದು ತಿಂಗಳು ತಿಂಗಳಿಗೂ ಅತ್ಯುತ್ತಮವಾದ ಲೇಖನವನ್ನು ಕಳುಹಿಸಿದೆನು. ಆದರೆ, ಧನ್ಯವಾದಗಳೇ ಹೊರತು ನನಗೆ ಅಗತ್ಯವಿರುವ ಹಣವು ಬರಲಿಲ್ಲ. ಸಾಲವು ದಿನೇ ದಿನೇ ಏರುತ್ತಾ ಹೋಯಿತು.

'ನನ್ನ ಸಾಥಿ'ಗೆ ಲೇಖನಗಳನ್ನು ಕೊಡುತಿದ್ದು ಆರು ತಿಂಗಳುಗಳು ಕಳೆದುಹೋದರೂ ಒಂದು ಚಿಕ್ಕಾಸು ಕೂಡ ಬರಲಿಲ್ಲ. ಸಂಪಾದಕರು ಧನಿಕರಾದುದರಿಂದ ನನಗೆ ತುಂಬಾ ಪ್ರತಿಫಲವು ದೊರಕೀತೆಂದು ಆಲೋಚಿಸಿದ್ದೆ. ಆದರೆ ಇಷ್ಟರ ತನಕ ಒಂದು ಪತ್ರವು ಕೂಡ ಬರಲಿಲ್ಲ. ಕೊನೆಗೆ ಸಂಪಾದಕ ಮಹಾಶಯರಿಗೆ ನನ್ನ ಘೋರವಾದ ಬಡತನವನ್ನು ವಿಜ್ಞಾಪನೆ ಮಾಡಿಕೊಂಡು ನನಗೆ ಐವತ್ತು ರೂಪಾಯಿಗಳನ್ನಾದರೂ ಕಳುಹಿಸಬೇಕೆಂದು ಪತ್ರದಿಂದ ಅರಿಕೆಮಾಡಿಕೊಂಡೆನು. ಸುಮಾರು ಹತ್ತು ದಿನಗಳ ನಂತರ ಟಪ್ಪಾಲುಪೇದೆಯು ಧಾರವಾಡದ ಮನಿಯಾರ್ಡರೊಂದನ್ನು ತಂದನು. ಪೇದೆಯನ್ನು ನೋಡಿ ತುಂಬಾ ಸಂತೋಷವಾಯಿತು. ಆದರೆ ಈ ಸಂತೋಷವು ಒಮ್ಮೆಗೆ ದುಃಖವಾಗಿ ಪರಿಣಮಿಸಿತು. ಏಕೆಂದರೆ ಮನಿಯಾರ್ಡರಿನಿಂದ ಬರೇ ಐದು ರೂಪಾಯಿಗಳು ಸಿಕ್ಕಿದವು. ಇದರಿಂದ ನನ್ನ ಸಾಲವನ್ನು ತೀರಿಸುವುದೆಂತು? ಮತ್ತು ದಿನ ದಿನದ ಖರ್ಚನ್ನು ನಡೆಸುವುದೆಂತು? ನಾನು ತುಂಬಾ ಚಿಂತಾಮಗ್ನನಾದೆನು. ಇದೇ ರೀತಿಯಲ್ಲಾದರೆ ನನ್ನ ಜೀವನದ ಪರಿಸಮಾಪ್ತಿಯಾಗಲು ಹೆಚ್ಚು ಸಮಯ ಹೋಗಲಾರದು. ಜಗತ್ತೆಲ್ಲವೂ ಶೂನ್ಯವಾಗಿ ಕಂಡುಬಂತು. ಏನನ್ಯಾಯವಿದು? ಅಹೋರಾತ್ರಿಯೂ ಕಷ್ಟಪಟ್ಟು ಉತ್ತಮವಾದ ಲೇಖನಗಳನ್ನು ಬರೆದುಕಳುಹಿಸಿದೆ; ಈಗ ಆರು ತಿಂಗಳ ಪರಿಶ್ರಮಕ್ಕೆ ಐದು ರೂಪಾಯಿಗಳು! ಪತ್ರಿಕೆಗಳನ್ನು ಹೊರಡಿಸುವುದು 'ಪೇಯಿಂಗ್' ಅಲ್ಲ; ಲೇಖನಗಳನ್ನು ಯಾ ಗ್ರಂಥಗಳನ್ನು ಬರೆಯುವುದು 'ಪೇಯಿಂಗ್' ಅಲ್ಲ; ಎಂಬುದರ ಅರ್ಥವು ಕಾರ್ಯತಃ ನನಗೆ ವಿದಿತವಾಯಿತು. ಆದರೆ ಇದರಿಂದ ಎದೆಗುಂದಲಿಲ್ಲ. 'ಬಂದುದೆಲ್ಲಾ ಬರಲಿ ಗೋವಿಂದನ ದಯೆ ನಮಗಿರಲಿ' ಎಂಬ ಗಾನವು ನನ್ನನ್ನು ಅಡಿಗಡಿಗೆ ಹುರಿದುಂಬಿಸುತಿತ್ತು.

ರೂಪಾಯಿಗಳ ಕಿಣಿ ಕಿಣಿ ಸದ್ದನ್ನು ಕೇಳಿ ನನ್ನ ಶ್ರೀಮತಿಯು ಹರ್ಷಿತವದನಳಾಗಿ, 'ಏನು, ರೂಪಾಯಿಗಳು ಬಂದವೆ? ನೋಡೋಣ' ಎಂದು ಉತ್ಸುಕತೆಯಿಂದ ಬಂದು ಕುಳಿತಳು. ಪಾಪ! ನನ್ನನ್ನು ವಿವಾಹವಾದಂದಿನಿಂದ ಒಂದು ಬೆಳ್ಳಿಯ ನಾಣ್ಯವನ್ನು ಕೂಡ ಅವಳು ನೋಡಲಿಲ್ಲ. ಆದುದರಿಂದ ಈಗ ಒಂದೇ ಸವನೆ ಐದು ಬೆಳ್ಳಿಯ ನಾಣ್ಯಗಳನ್ನು ನೋಡಿ ಸಂತೋಷಪಡುವುದರಲ್ಲಿ ಆಶ್ಚರ್ಯವೇನು? ಮದುವೆಯಾದಂದಿನಿಂದ ಒಂದು ದಿನ ನಾವು ಸುಖಸಲ್ಲಾಪಗಳನ್ನು ಆಡಿದ್ದಿಲ್ಲ. ನನ್ನ ಇದ್ದ ಆಯುಷ್ಯವೆಲ್ಲಾ ಲೇಖನಗಳನ್ನು ಬರೆಯುವುದರಲ್ಲಿ ಹೋಯಿತು. ನನಗಂತೂ ಸುಖವಿಲ್ಲ. ನನ್ನಿಂದ ಅವಳಿಗೂ ಸುಖವಿಲ್ಲ. ಅವಳು ಬಹಳ ಚತುರಳು, ಸಹನಾಶೀಲಳು. ಊರಿನ ಹೆಂಗಸರಂತೆ ತನಗೆ ಅದು ಬೇಕು, ಇದು ಬೇಕು ಎಂದು ನನ್ನನ್ನು ಕಾಡಿಸದೆ ಹರಕು ಮುರುಕು ಬಟ್ಟೆಗಳನ್ನು ಉಟ್ಟುಕೊಳ್ಳಲು ಹೇಸುತಿರಲಿಲ್ಲ. ಅವಳ ಆಭರಣಗಳನ್ನೆಲ್ಲಾ ಒತ್ತೆಯಿಟ್ಟೆನು. ನನ್ನಂಥಾ ಕಾಸಿಲ್ಲದವನು ಅವುಗಳನ್ನೆಲ್ಲಾದರೂ ಬಿಡಿಸಿ ತರುವುದುಂಟೇ? ಆದರೂ ಮನಸ್ಥೈರ್ಯದಿಂದ ಸಕಲ ಕಷ್ಟಗಳನ್ನು ಸಹಿಸುತ್ತ ನನ್ನ ಕೆಲಸದಲ್ಲಿ ತುಂಬಾ ಪ್ರೋತ್ಸಾಹಕೊಡುತಿದ್ದಳು. ಅವಳಲ್ಲಿ, ಈಗ ಕಷ್ಟಪಟ್ಟರೆ ಮುಂದಕ್ಕೆ ಸುಖವು ಲಭಿಸುವುದು ಎಂಬ ಭಾವನೆಯು ದೃಢವಾಗಿ ಬೇರೂರಿತ್ತು.

"ಪ್ರಿಯೇ ಶಾರದೆ, ಒಟ್ಟೇ ಐದು ರೂಪಾಯಿಗಳು ಬಂದಿವೆ. ಇದರಿಂದ ನಾವೇನು ಮಾಡಲಿ? ಮೊನ್ನೆ ಜೀನಸಿನ ಸಾಹುಕಾರ ನರಸಿಂಗರಾಯರು ರಿಜಿಸ್ತ್ರಿ ನೋಟೀಸ್ ಕಳುಹಿಸುವುದಾಗಿ ಹೆದರಿಸಿದ್ದಾರೆ. ಅವರಿಗೆ ರೂಪಾಯಿ 150 ಸಲ್ಲಬೇಕು."

"ಅವರನ್ನು ಪ್ರಾರ್ಥಿಸಿದರೆ, ಸ್ವಲ್ಪ ವಾಯಿದೆ ಕೊಟ್ಟಾರು".

"ವಾಯಿದೆಯಿಂದ ಏನು ಪ್ರಯೋಜನ? ನಾನು ಈ ಸಾಲ ಈ ಜನ್ಮದಲ್ಲಿ ಸಲ್ಲಿಸುವುದು ಅಸಾಧ್ಯ. ಅಲ್ಲದೆ ಅವರೊಬ್ಬರೆ ಸಾಲಗಾರರಲ್ಲ. ಬೀದಿ ಬೀದಿಯಲ್ಲಿ ಸಾಲಗಾರರು. ಕಂಸನಿಗೆ ಎಲ್ಲೆಲ್ಲೂ ಶ್ರೀಕೃಷ್ಣನ ಮೂರ್ತಿಯು ಕಂಡುಬಂದಂತೆ ನನಗೆ ಬೀದಿಬೀದಿಗಳಲ್ಲೂ ಸಾಲಗಾರರ ಕರಾಳಸ್ವರೂಪವು

ಗೋಚರಿಸುವುದು. ಮನೆಯಿಂದ ಒಂದು ಹೆಜ್ಜೆ ಮುಂದಿಡಲಿಕ್ಕೆ ಸಾಧ್ಯವಿಲ್ಲ.

"ಏನು ಮಾಡಲಿ? ನಮ್ಮ ಪ್ರಾರಬ್ಧ!"

* * * * * *

ಸಾಲಗಾರರ ರಿಜಿಸ್ಟ್ರಿ ನೋಟೀಸುಗಳು ಒಂದರ ಮೇಲೊಂದು ಬಂದವು. ಆದರೆ ಏನು ಮಾಡಲಾದೀತು? ಸಾಕ್ಷಾತ್ ಯಮನೇ ಬಂದರೂ ನನ್ನ ಹತ್ತರ ಕೊಡಲು ಹಣವಿಲ್ಲ. ಇನ್ನು ನನ್ನ "ವಾರಂಟು" ತೆಗೆಯಿಸಲು ಹೆಚ್ಚು ವಿಳಂಬವಾಗಲಾರದು. ಆದರೂ ನನ್ನ ಲೇಖನ ಕಲೆಯನ್ನು ಬಿಡುವಂತಿಲ್ಲ. ಎಡಬಿಡದೆ ಬರೆಯುತ್ತ ಸ್ಥಳೀಯ ಪತ್ರಿಕೆಗಳಿಗೆ ಕಳುಹಿಸುತ್ತಾ ಇದ್ದೆನು. ಇದರಿಂದ ಅಲ್ಪಸ್ವಲ್ಪವೇನೋ ಸಿಕ್ಕುತಿತ್ತು. ಆದರೆ ಇದರಿಂದ ಸಾಲ ತೀರಿಸಿ ಸುಖವಾಗಿ ಜೀವಿಸಲು ಸಾಧ್ಯವಿದ್ದಿಲ್ಲ. ಒಂದೇ ಒಂದು ಕೋಣೆಯೇ ನಮ್ಮ ಮನೆಯಾಗಿತ್ತು. ಅದಕ್ಕೂ ತಿಂಗಳಿಗೆ ಮೂರು ರೂಪಾಯಿ ಬಾಡಿಗೆ. ನನಗೆ ಸಿಕ್ಕುವುದು ಹತ್ತು ಹದಿನೈದು ರೂಪಾಯಿ. (ಆರ್ಥಿಕ ಅವ್ಯವಸ್ಥೆಯ ಕಾಲವೆಂದು ವೃತ್ತಪತ್ರಿಕೆಗಳು ನನಗೆ ಹೆಚ್ಚು ಕೊಡುತಿದ್ದಿಲ್ಲ.) ನಿದ್ರಿಸಲು ಹರಕುಮುರುಕಾದ ಚಾಪೆಯೊಂದು, ಊಟಮಾಡಲು ರಾಶಿ ಅಕ್ಕಿ, ಉಪ್ಪು ಮತ್ತು ಮೆಣಸು. ಹೀಗೆ ಬರೇ ಪ್ರಾಣಧಾರಣೆಗೆ ಬೇಕಾದಷ್ಟು ವಸ್ತುಗಳಲ್ಲದೆ ಮತ್ತಾವುದರ ಉಪಯೋಗವನ್ನೂ ನಾನು ಮಾಡುತಿದ್ದಿಲ್ಲ.

ನನ್ನ ಲೇಖನ ಕಲೆಯ ವ್ಯವಸಾಯದಲ್ಲಿ ನನ್ನ ಪತ್ನಿಯ ಸುಖವನ್ನೆಲ್ಲಾ ಮರೆತುಬಿಟ್ಟಿದ್ದೆನು. ಅವಳಾದರೋ ಮಹಾ ಸಾಧ್ವಿಯು. ಶರೀರದಲ್ಲಿ ಎಂತಹ ಪೀಡೆಗಳಾದರೂ ಒಂದನ್ನೂ ಹೇಳದೆ ನಗುಮೊಗವನ್ನೇ ನನಗೆ ತೋರಿಸುತಿದ್ದಳು. ಆದರೆ ಇದು ಎಷ್ಟರ ತನಕ ನಡೆದೀತು? ಒಮ್ಮಿಂದೊಮ್ಮೆ ಪ್ರಬಲವಾದ ಕೆಮ್ಮು ತಲೆದೋರಿತು. ಹಲವು ದಿನಗಳಾದರೂ ನಿಲ್ಲಲಿಲ್ಲ. ನಾನು ವೈದ್ಯರನ್ನು ಕರೆಯಹೊರಟರೆ ನನ್ನ ಕೈಯನ್ನು ಹಿಡಿದು ಹೋಗಬಿಡಳು. "ನೀವು ಲೇಖನ ಕೆಲಸವನ್ನು ನೋಡಿಕೊಳ್ಳಿರಿ; ನನ್ನ ರೋಗ ತನ್ನಷ್ಟಕ್ಕೆ ವಾಸಿಯಾಗುವುದು."

ಒಂದು ತಿಂಗಳು ಕಳೆಯಿತು, ರೋಗವು ಭೀಕರವಾದ ರೂಪವನ್ನು ತಾಳಿತು. ಕೊನೆಗೆ ಇದು ಕ್ಷಯರೋಗವೆಂದು ಶಂಕೆಯುಂಟಾಯಿತು.

ಇನ್ನು ವೈದ್ಯರನ್ನು ಕರೆಯದಿದ್ದರೆ ತಾನು ಸಾಂಸಾರಿಕ ಕರ್ತವ್ಯದಿಂದ ವಿಮುಖನಾದಂತಾಗುವುದು. ಪತ್ನಿಯನ್ನು ಸಮಾಧಾನಗೊಳಿಸಿ ನಗರದ ಪ್ರಸಿದ್ಧ ಕ್ಷಯರೋಗ ವೈದ್ಯರ ಬಂಗಲೆಗೆ ಹೋದೆನು. ಡಾಕ್ಟರರೆಂದರೇ ಮೈ ಜುಮ್ಮೆನ್ನುವುದು. ಅವರು ರೋಗಿಗಳ ಪರೀಕ್ಷೆ ಮಾಡುವುದರ ಮೊದಲು ಹಣದ ಪರೀಕ್ಷೆಯನ್ನು ಮಾಡುತ್ತಾರೆ. ಪ್ರಾಯಶಃ ರೋಗಿಯು ಕೊಡುವ 'ಫೀಸಿ'ನಲ್ಲಿ ರೋಗನಿದಾನ ಕ್ರಮದ ತತ್ವವೇನೋ ಇರಬೇಕು. ಅಂದರೆ ಹೆಚ್ಚು 'ಫೀಸ್'ನಿಂದ ರೋಗ ಬೇಗ ಗುಣವಾಗುತ್ತದೆ; ಕಡಮೆ ಕೊಡುವುದರಿಂದ ರೋಗ ವಾಸಿಯಾಗುವುದು ಮೆಲ್ಲಗೆ. ಧೈರ್ಯದಿಂದ ಬಂಗಲೆಗೆ ಹೋದೆನು. ಡಾಕ್ಟರ್ ಸಾಹೇಬರು ಎಲ್ಲೋ ವಿಝಿಟ್‌ಗೆ ಹೋಗಿದ್ದರು. ಸುಮಾರು ಒಂದು ಗಂಟೆಯ ವರೆಗೆ ಕಾದುಕೊಂಡೆನು. ನನ್ನ ಮನಸ್ಸು,—ಪತ್ನಿಯ ಸ್ಥಿತಿಯು ಏನಾಗುವುದೋ? ಒಬ್ಬಳೇ ರೋಗಿಯನ್ನು ಬಿಟ್ಟು ಬಂದಿದ್ದೇನೆ; ಅವಳನ್ನು ಉಪಚರಿಸುವವರಾರೂ ಇಲ್ಲ ಎಂದು ತಳಮಳಿಸುತಿತ್ತು. ಡಾಕ್ಟರ್ ಸಾಹೇಬರು ಕಾರಿನಿಂದ ಇಳಿದರು. ನನ್ನ ಹರಕುಮುರುಕು ಉಡುಪನ್ನು ನೋಡುತ್ತ 'ವಾಟ್ ಡು ಯೂ ವಾಂಟ್?' ಎಂದು ಗಂಭೀರ ಸ್ವರದಿಂದ ಕೇಳಿದರು. ನಾನು ಮೆಲ್ಲ ಮೆಲ್ಲನೆ ಬಂದ ಉದ್ದೇಶವನ್ನು ಅರಿಕೆಮಾಡಿಕೊಂಡೆನು.

"ಟೆನ್ ರುಪೀಸ್ ವಿಝಿಟಿಂಗ್ ಫೀಸ್" ಎಂದು ಪಟಕ್ಕನೆ ಹೇಳಿ ಇಝಿಚೆಯರಿನಲ್ಲಿ ಬಿದ್ದುಕೊಳ್ಳುತ್ತ ಚುಟ್ಟಾವನ್ನು ಸೇದತೊಡಗಿದರು.

'ಸ್ವಾಮಿ, ತೀರ ಬಡವನು, ಕಂಗಾಲನು. ನನಗೆ ಸಹಾಯವನ್ನು ಮಾಡಬೇಕು.'

"ನನ್ನಿಂದಾಗದು, ಧರ್ಮಾಸ್ಪತ್ರೆಗೆ ಹೋಗು."

"ರೋಗವು ಭಯಂಕರವಾದದ್ದರಿಂದ ತಮ್ಮಲ್ಲಿಗೆ ಬಂದೆ. ಬಡವನಾದ ನನ್ನ ಮೇಲೆ ಕರುಣೆಯಿಡಬೇಕು. ಹೇಗಾದರೂ ಮಾಡಿ ಒಂದೆರಡು ರೂಪಾಯಿಗಳನ್ನು ತಂದುಕೊಡುವೆನು."

'ಛಿಶ್! ಒಂದೆರಡು ರೂಪಾಯಿಗಳು! ಮೋಟಾರಿನ ಪೆಟ್ರೋಲಿಗೇ ಸಾಕಾಗಲಿಕ್ಕಿಲ್ಲ ಅದು!'

ಸಾಹೇಬರ ಕಲ್ಲುಮನಸ್ಸನ್ನು ನೋಡಿ ತುಂಬಾ ವ್ಯಥಿತನಾದೆನು. ಅವರನ್ನು ಕರೆದುಕೊಂಡು ಹೋಗದೆ ನಿವೃತ್ತಿಯಿಲ್ಲದಿದ್ದುದರಿಂದ ಹತ್ತು ರೂಪಾಯಿಗಳನ್ನು ದೊರಕಿಸುವ ಯೋಚನೆಯಲ್ಲಿದ್ದೆನು. ಆಗ ನನ್ನ ಚೀಲ ದಲ್ಲಿದ್ದ ಕಾದಂಬರಿಯು ನೆನಪಾಯಿತು. ಕೂಡಲೆ ಇನ್ನೊಂದು ಬೀದಿ ಯಲ್ಲಿರುವ ಪ್ರಕಾಶಕರಾದ ರಾಮಣ್ಣಾಚಾರ್ಯರಲ್ಲಿಗೆ ಹೋಗಿ ಪುಸ್ತಕ ವನ್ನು ಕೊಟ್ಟು 'ಸ್ವಾಮಿ, ಇದರ ಎಲ್ಲಾ ಹಕ್ಕನ್ನು ನಿಮಗೆ ಕೊಡುತ್ತೇನೆ. ದಯಮಾಡಿ ನನಗೆ ಹತ್ತು ರೂಪಾಯಿಗಳನ್ನು ಕೊಡಿರಿ' ಎಂದೆನು. ರಾಮಣ್ಣಾಚಾರ್ಯರು ಪುಸ್ತಕವನ್ನು ತೆಗೆದುಕೊಂಡು ಕೆಲವಂಶವನ್ನು ಓದಿ ನೋಡಿದರು. ಅವರು ಓದುತ್ತಿರಲು ನನ್ನ ವ್ಯಥಿತವಾದ ಮನಸ್ಸು ಮನೆಗೆ ಓಡುತಿತ್ತು. ಯಾವಾಗ ವೈದ್ಯರನ್ನು ಕರಕೊಂಡು ಹೋಗಲಿಲ್ಲಾ ಎಂದು ಹಾತೊರೆಯುತಿತ್ತು. ಪತ್ನಿಯ ಗತಿಯು ಈಗ ಏನಾಯಿತೆಂದು ದೇವರೇ ಬಲ್ಲನು. ತುಸು ಹೊತ್ತಿನ ನಂತರ ರಾಮಣ್ಣಾಚಾರ್ಯರು—'ಏನ್ರೀ, ಪುಸ್ತಕ ವೇನೋ ಒಳ್ಳೇದಿದೆ. ಆದರೆ,—'

**ನಾನು:**— ಆದರೇನು ಸ್ವಾಮಿ?

**ರಾಮಣ್ಣಾಚಾರ್ಯ:**— ಹತ್ತು ರೂಪಾಯಿ ಕೊಡಲಿಕ್ಕಾಗುವುದಿಲ್ಲ. ಐದು ರೂಪಾಯಿ ಕೊಡಬಹುದು.

**ನಾನು:**–ಸ್ವಾಮಿ, ಹತ್ತು ರೂಪಾಯಿ ಇಲ್ಲದಿದ್ದರೆ ನನ್ನ ಕೆಲಸವೆಲ್ಲಾ ಕೆಟ್ಟುಹೋಗುವುದು. ನನ್ನ ಹೆಂಡತಿಗೆ ಸೌಖ್ಯವಿಲ್ಲ. ವೈದ್ಯರು ಹತ್ತು ರೂಪಾಯಿಯಲ್ಲದೆ ಬರುವುದಿಲ್ಲ. ಆದುದರಿಂದ ರೂಪಾಯಿ ಕೊಟ್ಟು ಹೆಂಡತಿಯನ್ನು 'ಬಚಾವ' ಮಾಡುವ ಪುಣ್ಯ ಕಟ್ಟಿಕೊಳ್ಳಬೇಕು.

**ರಾಮಣ್ಣಾಚಾರ್ಯ:**— ನೀನು ಹೇಳುವುದೇನೋ ಸರಿ. ಆದರೆ ಈಗಿನ ಕಾಲದಲ್ಲಿ ಗ್ರಂಥಗಳನ್ನು ಪ್ರಕಟಿಸುವುದು "ಪೇಯಿಂಗ್" ಅಲ್ಲ. ಒಮ್ಮೊಮ್ಮೆ ತುಂಬಾ ನಷ್ಟ ಬೀಳುತ್ತದೆ. ಈಗ ಐದು ರೂಪಾಯಿ ತೆಗೆದುಕೋ.

**ನಾನು:**— ಸ್ವಾಮಿ ಕಂಗಾಲನಾದ ನನ್ನ ಮೇಲೆ ಕೃಪೆಯಿಟ್ಟು ಹತ್ತು ರೂಪಾಯಿ ಕೊಡಬೇಕು. ಇನ್ನು ಹೊತ್ತು ತೆಗೆದರೆ ಎಲ್ಲ ವ್ಯರ್ಥವಾಗುವುದು.

ರಾಮಣ್ಣಾಚಾರ್ಯರಿಗೆ ನನ್ನ ಮೇಲೆ ಕನಿಕರ ಹುಟ್ಟಿತೋ, ಏನೋ, ಹ
ರೂಪಾಯಿಯ ನೋಟನ್ನು ಕೊಟ್ಟುಬಿಟ್ಟರು. ಇನ್ನು ವೈದ್ಯರ ಬಂಗಲೆ
ಹೋಗೋಣ ಎನ್ನುತಿರುವಷ್ಟರಲ್ಲಿ, ಇದಿರಿನಲ್ಲಿ ನಮ್ಮ ಜೀನಸಿನ ಸಾಹುಕಾ
ನರಸಿಂಗರಾಯರು ಮತ್ತು ಒಬ್ಬ ಕೋರ್ಟ್ ಪೇದೆಯು ಬರುತಿದ್ದ
ಪೇದೆಯು ನನ್ನ ಸಮೀಪಕ್ಕೆ ಬರುತ್ತ 'ಭುಜಂಗರಾಯರೆಂದರೆ ನೀವಲ್ಲ
ಇದಕ್ಕೆ ದಸ್ಕತು ಹಾಕಿ' ಎಂದು ಒಂದು 'ವಾರಂಟ'ನ್ನು ಕೊಟ್ಟನ
ನನ್ನನ್ನು ಜೈಲಿಗೆಳೆದರೆ ಪತ್ನಿಯ ಗತಿಯೇನು? ನನ್ನ ಕೆಲಸವು ಒಟ್ಟಿಗೆ ಕೆ
ತಲ್ಲಾ ಎಂದು ವ್ಯಥೆಪಡುತ್ತ 'ಸ್ವಾಮಿ, ನರಸಿಂಗರಾಯರೇ, ನನ್ನನ್ನು ಈ
ಬಿಡಿರಿ. ಇನ್ನು ನಾಲ್ಕೈದು ದಿನಗಳ ನಂತರ ಬೇಕಾದ ಹಾಗೆ ಮಾಡಿ
ನನ್ನ ಪತ್ನಿಯು ಸಾಯಲಿಕ್ಕಾಗಿದ್ದಾಳೆ. ಮನೆಯಲ್ಲಾರೂ ಇಲ್ಲ; ವೈ
ರನ್ನು ಕರಕೊಂಡು ಹೋಗಿಲಿಕ್ಕಿದ್ದೇನೆ. ದಯೆಯಿಟ್ಟು ನನ್ನನ್ನು ಬಿಡಬೇ
ಎಂದು ಪ್ರಾರ್ಥಿಸಿದೆನು.

'ಗೊತ್ತುಂಟೂ ಮುಂಡಾಳ ನಿನ್ನದೆಲ್ಲಾ! ಹೀಗೆ ಅನೇಕ ಸರ್ತಿ ಹೀ
ಹೇಳಿದ್ದಿ ನೀನು. ನಿನ್ನ ಹೆಂಡತಿ ಸತ್ತರೆ ನನಗೇನೋ! ನನ್ನ ರೂಪಾ
ಬರದೆ ಬಿಡಲಿಕ್ಕಿಲ್ಲ' ಎಂದು ಘುಡುಘುಡಿಸಿದರು.

'ಸ್ವಾಮಿ, ಈ ಒಂದು ದಿನಕ್ಕಾದರೂ ನನ್ನನ್ನು ಬಿಡಬೇಕು' ಎಂ
ಪುನಃ ಪ್ರಾರ್ಥಿಸಿದೆನು.

'ಆಗದು, ಎಂದಿಗೂ ಆಗದು. ಪೇದೆ! ತೆಗೆದುಕೊಂಡು ಹೋಗು ಇ
ನನ್ನು' ಎಂದು ನರಸಿಂಗರಾಯರು ಕೋಪದಿಂದ ನಡೆದುಬಿಟ್ಟರು.

ಪೇದೆಯೊಡನೆ, ಡಾಕ್ಟರರ ಬಂಗಲೆಗೆ ಹೋಗುವುದರ ಬದಲಿಗೆ ನೆ
ವಾಗಿ ಜೈಲಿಗೆ ಒಯ್ಯಲ್ಪಟ್ಟೆನು.

ನಾನು 'ಶಾರದಾ, ನಿನಗಾರು ಗತಿ? ದೇವರೇ! ನೋಡಿಕೊಳ್ಳು' ಎಂ
ನಿಟ್ಟುಸಿರಿಟ್ಟೆನು.



# ತಿರುಪೆಯವಳು.



ಕೃಶವಾದ ಮೈ; ಹರಡಿದ ಕೇಶರಾಶಿ; ಮಾಸಿದ ಮುಖ; ಮಾನ ಮುಚ್ಚಲೊಂದು ಹರಕು ಬಟ್ಟೆಯ ಚಿಂದಿ; ಕಂಕುಳಲ್ಲೆರಡು ಮಕ್ಕಳು. ಭಿಕ್ಷುಕಿಯು ಬಿಸಿಲಿನ ತಾಪವನ್ನು ತಾಳಲಾರದೆ ಮರದಡಿಯಲ್ಲಿ ನಿಂತಿದ್ದಳು.

ಮಧ್ಯಾಹ್ನ ಎರಡು ಘಂಟೆಯ ಸಮಯ. ತಾಯಿಮಕ್ಕಳಿಗೆ ಆಹಾರ ವಿಲ್ಲದೆ ದಿನಗಳೆರಡಾಗಿದ್ದುವು. ಮಕ್ಕಳು ಹಸಿವಿನಿಂದ ಚೀರತೊಡಗಿದುವು.

'ಭಿಕ್ಷಾ ನೀಡೀ ತಾಯಿ!'

ಭಿಕ್ಷುಕಿಯು ಶ್ಯಾಮಯ್ಯನ ಮನೆಯ ಮುಂಗಡೆ ನಿಂತು ಕೂಗಿದಳು.

ಉತ್ತರವು ಬರಲಿಲ್ಲ. ಪುನಃ ಕೂಗಿದಳು.

'ಭಿಕ್ಷಾ ನೀಡೀ ಅಮ್ಮಾ!'

ಉತ್ತರದ ಬದಲಾಗಿ ತೆರೆದಿದ್ದ ಹೊರಬಾಗಿಲು ಮುಚ್ಚಿಕೊಂಡಿತು. ಮಕ್ಕಳು ಇನ್ನೂ ಅಳುತ್ತಲೇ ಇದ್ದುವು. ಭಿಕ್ಷುಕಿಯು ಮುನ್ನಡೆದಳು.

ಪಕ್ಕದ ಮನೆಯ ಮುಂಗಡೆ ಹೋಗಿ ಭಿಕ್ಷುಕಿಯು ಬೇಡಿದಳು. ಮೊದಮೊದಲು ಉತ್ತರ ಬರಲಿಲ್ಲ. ಕೊನೆಗೆ ಮುಚ್ಚಿದ ಕದವು ತೆರೆದು ಭಯಂಕರ ಸ್ತ್ರೀವ್ಯಕ್ತಿಯೊಂದು ಹೊರಗೆ ತಲೆಹಾಕಿ, 'ಯಾಕೆ ಕೂಗಿ ಸಾಯ್ತಿ? ಮನೆ ಮುಂದೆ ಇಷ್ಟು ಮಧ್ಯಾಹ್ನದಲ್ಲಿ ಕೂಗಲು ನಿನಗೇನು........ಸರಿ ಇಲ್ಲವೆ? ನಡಿಯಾಚೆ!' ಎಂದು ಗದರಿಸಿತು. ಭಿಕ್ಷುಕಿಯು ನಡುಗಿದಳು. ಕಣ್ಣುಗಳಲ್ಲಿ ನೀರು ತುಂಬಿತು. ತಲೆ ಕೆಳಗೆ ಹಾಕಿ, ಅಳುತಿದ್ದ ಮಕ್ಕಳೊಡನೆ ಮುಂದೆ ಹೋದಳು.

* * * * * *

ಸಾಯಂಕಾಲವಾಗುತ್ತಾ ಬಂದಿತು. ಒಂದು ಹಿಡಿ ತಿಂಡಿಯೂ ದೊರೆಯಲಿಲ್ಲ. ಮಕ್ಕಳು ಕಂಕುಳಲ್ಲೇ ನಿದ್ದೆ ಹೋದುವು. ಭಿಕ್ಷುಕಿಯು ನಡೆಯಲಾರದೆ ರಾಯರ ಮನೆಯ ಮುಂಬಾಗಿಲ ಪಕ್ಕದಲ್ಲಿ ಕುಳಿತಳು.

ಒಳಗಡೆ ಉಚ್ಚಾಸನದಲ್ಲಿ ರಾಯರು ಕುಳಿತು ಬರತಕ್ಕ ರೂಪಾಯಿಗಳನ್ನು ಎಣಿಸಿ ಖಜಾನೆಗೆ ಸೇರಿಸುತಿದ್ದರು. ಪಕ್ಕದಲ್ಲೆ ರಾಯರ ಹನ್ನೊಂದು ವರ್ಷದ ಮಗ ರಾಮುವು ಕುಳಿತಿದ್ದನು. ಭಿಕ್ಷುಕಿಯು ಬಂದೊಡನೆ ರಾಮುವು ಹೆಬ್ಬಾಗಲಿಗೆ ಓಡಿ, ಅವಳನ್ನು ನೋಡುತ್ತಾ ನಿಂತನು. ಭಿಕ್ಷುಕಿಯು ಮಕ್ಕಳನ್ನಪ್ಪಿಕೊಂಡು ಅಳುತ್ತಾ ಇದ್ದಳು. ರಾಮುವಿಗೆ ಅವಳಲ್ಲಿ ಕನಿಕರಹುಟ್ಟಿತು.

'ಯಾಕವ್ವಾ ಅಳುವಿ?' ರಾಮು ಕೇಳಿದನು.

ಭಿಕ್ಷುಕಿಯು ತಲೆಯನ್ನೆತ್ತಿ ಕಣ್ಣೀರನ್ನೊರಸಿಕೊಂಡಳು. ಎದುರಿಗೆ ರಾಮುವು ನಿಂತಿದ್ದನು. ಅವನಾ ತುಂಬಿದ ದೇಹವನ್ನೂ ಸುಂದರಮುಖವನ್ನೂ ನೋಡಿ ಒಂದು ಸಲ ಅವಳು ತನ್ನ ದುಃಖವನ್ನೆಲ್ಲಾ ಮರೆತಳು. ಇಂತಹ ಮಕ್ಕಳೇ ದೇಶದಲ್ಲಿ ತುಂಬಲೆಂದು ಪ್ರಾರ್ಥಿಸಿದಳು. ಮರು ಕ್ಷಣದಲ್ಲೆ ತನ್ನ ಹಸಿವಿನಿಂದ ಸಾಯಲಿಕ್ಕಾದ ಮಕ್ಕಳನ್ನು ಕಂಡೊಡನೆ ಕಣ್ಣಲ್ಲಿ ನೀರು ತುಂಬಿತು.

'ಅಪ್ಪಾ, ಮಕ್ಕಳು ಹಸಿವಿನಿಂದ ಸಾಯುತಿರುವುವು. ಏನಾದರೂ ಸ್ವಲ್ಪ ತಿಂಡಿ ಕೊಡುವೆಯೊ?'

ರಾಮುವು ಒಳಗೆ ಓಡಿದನು. ಆದರೆ ಕೆಲಹೊತ್ತಿನಲ್ಲೆ ಮುಖ ಸಪ್ಪೆಮಾಡಿಕೊಂಡು ಹೊರಗೆ ಬಂದನು. ಅವನ ತಾಯಿಯವರು ಅವನನ್ನು ಗದರಿಸಿ ಕಳುಹಿದ್ದರು.

ಮಕ್ಕಳೆದ್ದು ಭಿಕ್ಷುಕಿಯನ್ನು ಆಹಾರಕ್ಕಾಗಿ ಪೀಡಿಸುತಿದ್ದುವು. ಅವಳು ಅವುಗಳನ್ನು ಸಂತಯಿಸುವುದಕ್ಕೆ ಪ್ರಯತ್ನಿಸುತಿದ್ದಳು. ತಾಯಿ ಮಕ್ಕಳ ದುಃಖವನ್ನು ಕಂಡು ರಾಮುವಿಗೂ ಕಣ್ಣೀರು ತುಂಬಿತು.

ಅವನಿಗೆ ಏನು ಮಾಡಲೂ ತೋಚಲಿಲ್ಲ. ತಂದೆಯವರೊಡನೆ ವಿಚಾರಿಸಲೆ? ಎನ್ನಿಸಿತು. ಆದರೆ ಅವರ ಉಗ್ರಸ್ವಭಾವವು ನೆನಪಿಗೆ ಬಂದೊಡನೆ

ಈ ಯೋಚನೆಯನ್ನು ಅಲ್ಲಿಗೆ ನಿಲ್ಲಿಸಿದನು. ಕೂಡಲೆ ಅವನ ಮನಸ್ಸಿಗೆ ಏನೋ ಹೊಳೆಯಿತು. ಮುಖವರಳಿತು. ಒಳಕ್ಕೆ ಓಡಿ ಏನನ್ನೋ ಕಾಗದ ದಲ್ಲಿ ಸುತ್ತಿ ತಂದನು. ಅದನ್ನು ಭಿಕ್ಷುಕಿಯ ಮಡುಲಲ್ಲಿ ಹಾಕಿ 'ಎಲ್ಲಿಗಾ ದರೂ ಹೊರಟು ಹೋಗು' ಎಂದನು. ರಾಯರು, ರಾಮುವು ಭಿಕ್ಷುಕಿ ಯೊಡನೆ ಮಾತನಾಡುತಿದ್ದುದನ್ನು ಕಂಡು ಗದರಿಸಿದರು. ರಾಮುವು ಸುಮ್ಮನೆ ಅವರ ಪಕ್ಕದಲ್ಲಿ ಹೋಗಿ ಕುಳಿತನು. ಭಿಕ್ಷುಕಿಯು ಹೊರಟು ಹೋದಳು.

ಹೊತ್ತು ಮುಳುಗಿತು. ರಾತ್ರಿಯಾಯಿತು. ಏಳು ಘಂಟೆಯ ಸಮಯದಲ್ಲಿ ಭಿಕ್ಷುಕಿಯು ಪಾಳುಗುಡಿಯೊಂದರ ಜಗಲಿಯ ಮೇಲೆ ಕುಳಿತು ರಾಮು ಕೊಟ್ಟ ಗಂಟನ್ನು ಬಿಚ್ಚಿದಳು. ಬೆಳದಿಂಗಳಲ್ಲಿ ಅವಳು ಜಜ್ಜಿದ ಕೈಬಳೆಯೊಂದನ್ನೂ ನಾಲ್ಕು ಬಿಲ್ಲೆಗಳನ್ನೂ ಕಂಡಳು. ರಾಮುವು ಮನಕರಗಿ, ತನ್ನೊಡನಿರುವ ನಾಲ್ಕು ಬಿಲ್ಲೆಗಳು ಹಸಿದ ಭಿಕ್ಷುಕಿ ಮತ್ತು ಮಕ್ಕಳ ಒಂದು ತುತ್ತು ಆಹಾರಕ್ಕೂ ಸಾಲದೆಂದು ತನ್ನ ಕೈಬಳೆಯನ್ನು ತೆಗೆದುಕೊಟ್ಟಿದ್ದನು.

ರಾಮುವಿನ ಉದಾರತ್ವವನ್ನು ಕಂಡು ಭಿಕ್ಷುಕಿಯು ಹಿಗ್ಗಿದಳು. ಆದರೆ ಗುಟ್ಟುರಟ್ಟಾದರೆ ರಾಮುವಿನ ಅವಸ್ಥೆ ಏನಾಗಬಹುದೆಂದು ಅವಳು ಯೋಚಿಸಿದ ಕೂಡಲೆ ನಡುಗಿದಳು. ಮಕ್ಕಳನ್ನು ಅಲ್ಲೇ ಮಲಗಿಸಿ ರಾಯರ ಮನೆಯ ಕಡೆಗೆ ಓಡಿದಳು.

ರಾಮುವು ಹೊರಗಿರಲಿಲ್ಲ. ಕರೆಯಲು ಅವಳಿಗೆ ಧೈರ್ಯವಾಗಲಿಲ್ಲ. ನಾಳೆ ಕೊಡಬಹುದೆಂದೆಣಿಸಿ ಹಿಂದಕ್ಕೆ ಹೊರಟಳು. ಹೋಗುವಾಗ ಒಂದಾಣೆಯ ಹಣ್ಣುಗಳನ್ನು ತೆಗೆದುಕೊಂಡು ಹೋಗಿ ಮಕ್ಕಳಿಗೆ ತಿನ್ನಿಸಿ ನೀರನ್ನು ಕುಡಿಸಿದಳು. ತಾನು ಮಾತ್ರ ಸ್ವಲ್ಪ ನೀರನ್ನು ಕುಡಿದಳು.

ಮರುದಿನ ಪ್ರಾತಃಕಾಲ ರಾಮುವನ್ನು ಮಿಾಯಿಸುತಿದ್ದಾಗ ಅವನ ಕೈಯಲ್ಲಿ ಬಳೆಯಿಲ್ಲದಿರುವುದನ್ನು ಕಂಡ ಅವನ ತಾಯಿಯವರು ನಡೆದ ವಿಷಯವನ್ನು ಯಜಮಾನನಿಗೆ ತಿಳಿಸಿದರು. ರಾಮುವನ್ನು ಸಮಾಧಾನದಿಂದ ಕೇಳಿದರು. ಗದರಿಸಿ ಕೇಳಿದರು. ರಾಮುವು ತನ್ನೊಳಗೇ ವಿಚಾರಿಸಿದನು.

'ನಿಜ ಸಂಗತಿಯನ್ನು ತಿಳಿಸಲೇ?.......ಬೇಡ! ನಿಜವನ್ನು ತಿಳಿದ ತಂದೆಯವರು ನನ್ನ ಬೆನ್ನ ಚರ್ಮವನ್ನು ಸುಲಿಯದೆ ಬಿಡರು. ಅಲ್ಲದೆ ನನ್ನಿಂದ ಬಳೆ ಪಡೆದ ತಪ್ಪಿಗಾಗಿ ಭಿಕ್ಷುಕಿಯೂ ತೊಂದರೆಪಡಬೇಕಾದೀತು.' ಆದ ಕಾರಣ ರಾಮು ತಾನರಿಯೆನೆಂದನು. ಬಳೆಯನ್ನಾರೋ ಕದ್ದಿರುವರೆಂದಾಯಿತು. ಆಳುಗಳೆಲ್ಲರ ವಿಚಾರಣೆಯಾಯಿತು. ಆದರೆ, ಬಳೆ ಬೇರೆ ಸಿಕ್ಕಲಿಲ್ಲ. ಶ್ಯಾಮರಾಯರಿಗೆ ಮುಂಚಿನ ದಿನ ರಾಮುವು ಭಿಕ್ಷುಕಿಯೊಡನೆ ಮಾತನಾಡುತಿದ್ದುದು ನೆನಪಿಗೆ ಬಂದಿತು. ಭಿಕ್ಷುಕಿಯೇ ರಾಮುವನ್ನು ಮೋಸಗೊಳಿಸಿ ಬಳೆಯನ್ನು ಕದ್ದಿರುವಳೆಂದಾಯಿತು. ವಿಚಾರವು ಪೋಲೀಸ್ ಠಾಣೆಗೆ ಅರಿಕೆಮಾಡಲ್ಪಟ್ಟಿತು.

*　　*　　*　　*　　*　　*

ಭಿಕ್ಷುಕಿಯನ್ನು ಹಿಡಿದರು. ಶೋಧಿಸಿದರು. ಬಳೆಸಿಕ್ಕಿತು. ಸುತ್ತಲೂ ಜನರು ಸುತ್ತಿದರು. ಗದ್ದಲಕ್ಕೆ ಪ್ರಾರಂಭವಾಯಿತು.

'ಬಳೆಯೆಲ್ಲಿ ಸಿಕ್ಕಿತು?'

'ಬೊಗಳು ಕಳ್ಳೆ ರಂ . . . . '

'ರಾಮುವನ್ನು ಕೊಲ್ಲಲೆತ್ನಿಸಿದವಳಿವಳು.'

'ಬಳೆಯನ್ನು ಮಾತ್ರವೇ ತೆಗೆದು ಮಹತ್ಕಾರ್ಯ ಮಾಡಿದಳು.'

'ಎಲ್ಲಿ ಕದಿಯುವುದೆಂದು ಊರಲ್ಲಿ ಭಿಕ್ಷುಕಿಯ ಸೋಗಿನಿಂದ ಸುತ್ತಾಡುತಿದ್ದ ಇವಳನ್ನು ನಾನು ಮೊದಲೇ ಅನುಮಾನಿಸಿದ್ದೆನು.'

'ಇನ್ನೇನನ್ನು ಮಾಡಲೆಣಿಸಿರುವಳೋ!'

'ಎಲ್ಲಿಂದ ನಮ್ಮೂರಿಗೆ ಬಂದ ಮಹಾಮಾರಿ ಇವಳು?'

'ಭಿಕ್ಷುಕಿಯ ವೇಷ ತಳೆದ ರಾಕ್ಷಸಿ!'

'ಹೊಡೆ! ಅವಳನ್ನು.'

'ತಿವಿ! ಅವಳನ್ನು.'

'ದೂಡವಳನ್ನು!'

'ಮಗುವಿನ ಹತ್ಯಾಕಾಂಕ್ಷಿಣಿಯಾದ ನರಪಿಶಾಚಿ!'

ಎಲ್ಲಾ ದಿಕ್ಕುಗಳಿಂದ ಜನರು ಒತ್ತಿದರು. ಕೆಲವರು ಅವಳ ಕೂದಲನ್ನು ಹಿಡಿದೆಳೆದರು, ಕೆಲವರು ದೂಡಿದರು, ಕೆಲವರು ಹೊಡೆದರು, ಕೆಲವರು ಎಳೆದರು, ಕೆಲವರು ಕೋಲುಗಳಿಂದ ತಿವಿದರು, ಕೊಡೆಗಳಿಂದ ಬಡಿದರು, ಕಲ್ಲುಗಳಿಂದ ಹೊಡೆದರು, ಮುಖದ ಮೇಲೆ ಉಗುಳಿದರು. ಅಧಿಕಾರಿಗಳಿಗೆ ಗದ್ದಲವನ್ನು ನಿಲ್ಲಿಸಲು ಸಾಕೋಸಾಕಾಯಿತು. ಮರುದಿನ ವಿಚಾರಣೆಯಾದನಂತರ ತಕ್ಕ ಶಿಕ್ಷೆಯಾಗುವುದೆಂದು, ಯಾರೋ ಕೂಗಿಕೊಂಡ ಮೇಲೆ ಗಲಭೆಯು ಸ್ವಲ್ಪ ಕಡಿಮೆಯಾಯಿತು.

ಭಿಕ್ಷುಕಿಯ ಮೈಯಿಂದ ರಕ್ತವು ಸೋರುತಿತ್ತು. ಮಕ್ಕಳು ಕಂಕುಳಲ್ಲೇ ಮೂರ್ಛೆಹೋಗಿದ್ದುವು. ಇಷ್ಟಾದರೂ ಭಿಕ್ಷುಕಿಯು ರಾಮುವಿನ ಮೇಲೆ ತಪ್ಪನ್ನು ಹೊರಿಸಲೆತ್ನಿಸಲಿಲ್ಲ. ಅವನನ್ನು ಹರಸಿದಳು. ಅವಳು ಸತ್ಯವನ್ನು ಹೇಳುತಿದ್ದರೂ ಅವಳನ್ನು ನಂಬುವರಾರು?

* * * * * *

ಮರುದಿನ ಅಧಿಕಾರಿಯು ಭಿಕ್ಷುಕಿಯನ್ನು ನ್ಯಾಯಸ್ಥಾನಕ್ಕೊಯ್ಯಲು ಠಾಣೆಯ ಬಾಗಿಲು ತೆರೆದನು. ಭಿಕ್ಷುಕಿಯು ಮಕ್ಕಳನ್ನಪ್ಪಿಕೊಂಡು ಮಲಗಿದ್ದಳು. ಅಧಿಕಾರಿಯು ಕೂಗಿದನು; ತಟ್ಟಿದನು. ಆದರೆ ಸತ್ಯಲೋಕಕ್ಕೆ ತೆರಳಿದ್ದ ನಿರಪರಾಧಿಯಾದ ತಿರುಪೆಯವಳು ಉತ್ತರ ಕೊಡುವಳೆ?



# ಥಣ್‌ಬರಥ.

೧.



ಪೇಟೆಯಲ್ಲಿ ಎರಡು ದಿನ–ಎರಡೇ ಎರಡು ದಿನ ಮಾತ್ರ ಇದ್ದು ಹಳ್ಳಿಯಲ್ಲಿ ಕಾಲಿಟ್ಟೊಡನೆಯೇ ಸ್ವರ್ಗೀಯ ಭಾವನೆಯು ನರಕದಲ್ಲಿ ಹುದುಗಿದಂತೆ ಕಂಡು ಬರುವುದೆಂಬುದು–ಅದು ನಮ್ಮ ನಿಮ್ಮ ಮಾತಲ್ಲ; ಇಡೀ ಪ್ರಪಂಚದ ಅಮೋಘವಾದ ಅನುಭವ! ತಮ್ಮ ಊರಿನ ವಿದ್ಯೆಯನ್ನು ಆಯ್ದು, ಹೆಚ್ಚಿನ ಸಂಗ್ರಹಕ್ಕಾಗಿ ಮಂಗಳೂರಿನ ಭವ್ಯವಾದ ಕೋಲೇಜಿನ ಮೆಟ್ಟಿಲನ್ನೇರಿ, ತಮ್ಮ ಗುರಿಯನ್ನು ಕೊನೆಗಾಣಿಸಿ ಹಿಂದಿರುಗುವಂದು ಎಷ್ಟು ವಿದ್ಯಾರ್ಥಿಗಳು 'ಹಾಯ್! ಮಂಗಳೂರ!' ಎಂದು ಹಲುಬಿ ಕಾತರಿಸಿ ಕಣ್ಣೀರು ಸುರಿಸಿಲ್ಲ? ಹೆಚ್ಚೇಕೆ? ಅನಾಗರಿಕ ವೃತ್ತಿಗಿಂತಲೂ ಅಪಮಾನದ ಹೊರೆಯಾದರೂ ಲೇಸೆಂದು ಬಗೆದು ಒಂದೊಂದು ತರಗತಿಯಲ್ಲೇ ಎಷ್ಟೋ ಆಯುಸ್ಸನ್ನು ಕಳೆವಷ್ಟರ ವರೆಗೂ ಮುಂಬರಿದ ಪ್ರೌಢರು ಎಷ್ಟೋ ಮಂದಿ ಎಂದರೆ ಆ ಮಾತಿನಲ್ಲಿ ಸತ್ಯಾಂಶವೇ ಹೆಚ್ಚು!

ಆದರೆ ಈ ಸಿದ್ಧಾಂತ ಸೂತ್ರಕ್ಕೆ ಹೊರತಾದುದೆಂದರೆ ನಮ್ಮ ಹಳ್ಳಿಯೊಂದೇ! ನೂರಾರು ವರುಷಗಳಿಂದಲೂ ನಾಗರಿಕವೃತ್ತಿಯಲ್ಲೇ ಮುಳುಗಾಡಿದವನೇ ಆಗಲಿ, ನಮ್ಮೂರಿಗೆ ಬಂದು ಬೇಸರಗೊಂಡುದನ್ನು ಇತ್ತೀಚೆಗೆ ನಾವು ಕಂಡು ಕೇಳಿದುದಿಲ್ಲ. ದೇವತಾನುಗ್ರಹದಿಂದ ಶಂಕರರಾಯರ ಉಸಿರು ಅಲ್ಲಾಡುವಷ್ಟರ ತನಕ ಅಂತಹ ಸಂದರ್ಭವು ಎಂದೆಂದಿಗೂ ನಮ್ಮಲ್ಲಿಗೆ ಬಂದೊದಗಲಾರದೆಂದು, ನಮ್ಮೆಲ್ಲರ ಘನವಾದ ಭರವಸೆ!

ನಮ್ಮ ರಾಯರೆಂದರೇನು? ಅವರ ಠೀವಿಯೇನು? ಒಂದೇ ಮಾತಿನಲ್ಲಿ ಅವರ ನಡೆನೀತಿಗಳನ್ನು ತಿಳಿಸುವುದಾದರೆ, ಅವರು ನಡೆದುದೇ ನಡೆ! ನುಡಿದುದೇ ನೀತಿ! ದಿನದ ದುಡಿತಗಳಿಂದ ಬೇಸತ್ತ ಹಳ್ಳಿಗರ ಮನಸ್ಸಿಗೆ

ಉತ್ಸಾಹದಾಯಕವಾದುದೆಂದರೆ ಅವರ ಚರಿತ್ರೆಯೊಂದೇ! ನಮ್ಮ ಹಳ್ಳಿಯ ಹುಡುಗರ ಮೃದುಮಧುರವಾದ ಕಂಠದಿಂದ ಸದಾ ಹೊರಸೂಸುತಿರುವ ಗಾನವೆಂದರೆ ನವರಸಭರಿತವಾದ ಆ ದಿವ್ಯ ಚರಿತಾಮೃತವೇ! ಅದಂತಿರಲಿ. ನಮ್ಮಲ್ಲಿಯ ಅರ್ಥಧಾರಿಗಳನೇಕರು ತಮ್ಮ ಯಕ್ಷಗಾನ ಸಾಮ್ರಾಜ್ಯದಲ್ಲಿ ಆ ಪಾವನಚರಿತ್ರೆಯು ತಲೆದೋರದುದಕ್ಕಾಗಿ ಎಷ್ಟೋ ಕೊರಗುತಿದ್ದ ರೆಂದ ಮೇಲೆ..............!

ಶಂಕರರಾಯರೆಂದರೆ ನಮ್ಮ ಊರಿನ ಪ್ರಧಾನರು. ಕುಲಾಗತವಾದ ಸಂಪತ್ತೇ ಅವರನ್ನು ಮಹತ್ವದ ಗಿರಿಗೆ ಏರಿಸಿರುವುದು. ಆದುದರಿಂದಲೇ ಅವರ ಮಾತನ್ನು ಯಾವನೂ ಮೀರಿ ನಡೆಯಲಾರನು. ಅದೃಷ್ಟವಶಾತ್ ನಡೆದರೆ— ಅವನ ಅವತಾರವು ಅಲ್ಲಿಗೇ ಸಮಾಪ್ತವಾಗುತಿತ್ತು.

ರಾಯರು ವಿಷಯಸುಖಗಳ ಪರಮಭಕ್ತರು. ಅದಕ್ಕಾಗಿ ಚಿಕ್ಕಂದಿ ನಲ್ಲೇ ಎಷ್ಟೋ ಸಾಹಸಕೃತ್ಯಗಳನ್ನು ಮಾಡಿದ ಚರಿತಾರ್ಥರು! ಅವರೇನಾ ದರೂ ತಮ್ಮ ಜೀವಿತದಲ್ಲಿ ಮಹತ್ಕಾರ್ಯಗಳನ್ನು ಮಾಡಿದುದಿದ್ದರೆ ಅದು ಆ ಸಲುವಾಗಿಯೇ ಸರಿಯೆಂದು ನಿರಾತಂಕವಾಗಿ ನುಡಿಯಬಹುದು. ಪುಷ್ಪಗಳಿಂದ ಪುಷ್ಪಗಳಿಗೆ ಹಾರಿ ಪ್ರತಿ ಪುಷ್ಪಗಳ ರಸವನ್ನಾಸ್ವಾದಿಸುವ ನವ ನವೋನ್ಮೇಷಿಯಾದ ಭ್ರಮರದ ವರ್ತನೆಯಲ್ಲಿ ರಾಯರಿಗೆ ಹೆಚ್ಚಿನ ಆದರ. ಆದುದರಿಂದಲೇ ಮೂವತ್ತು ವರ್ಷಗಳೊಳಗೆ ಐದು ಮದುವೆಯ ಸುಖವನ್ನು ಸವಿದು ಆರನೆಯದಕ್ಕಾಗಿ ಕೈಚಾಚಿ ಕುಳಿತಿರುವ ಮಹಾನುಭಾವಿಕೆಯ ಬಿರುದು ಅವರ ಪಾಲಿಗೆ!

ಆದರೂ ಅವರ ಒಂದು ವಿಶೇಷ ಗುಣದ ಕುರಿತು ನಮಗೆಲ್ಲರಿಗೂ ಬಹಳ ಸಂತೋಷ. ಬಡತಾಯಿಯ ಮಕ್ಕಳಾರಾದರೂ ಗೋಳಾಡುತಿರು ವುದನ್ನು ಅವರೆಂದಿಗೂ ಕಂಡು ಸಹಿಸಲಾರರು. ಆದುದರಿಂದ ಇನ್ನೊಂದು ಮದುವೆಯಾಗುವ ಮುಂಚಿತವಾಗಿ ಮೊದಲಿನ ಹೆಂಡತಿಯನ್ನು 'ಇತಿ ಶ್ರೀ' ಮಾಡಿ, ಈ ಪ್ರಪಂಚದ ದುಃಖದಿಂದ ಉದ್ಧರಿಸುವ ವಿಷಯದಲ್ಲಿ, ಎಂದಿಗೂ ಅವರು ಹಿಂದೆ ಮುಂದೆ ನೋಡಿ ಕಳುಹುತಿರಲಿಲ್ಲ. ಎಂತಹ ಉದಾರಬುದ್ಧಿ!

ರಾಯರಲ್ಲಿಂದು, ಅನಿರೀಕ್ಷಿತವಾದೊಂದು ಮಹಾಸಭೆ! ಅವರ ಊಳಿಗದವನಿಗೆ ಜನರನ್ನು ಒಟ್ಟುಗೂಡಿಸುವ ದೆಸೆಯಿಂದಾಗಿ ಅರೆಗಳಿಗೆಯ

ವಿಶ್ರಾಂತಿಯೂ ಇಲ್ಲ. ಊರ ಎಷ್ಟೋ ಮಂದಿ ಸದ್ಗೃಹಸ್ಥರು ಬಂದು ಸೇರಿರುವರು. ಗುತ್ತಿನ ರಾಮಯ್ಯ ಸೆಟ್ಟರು, ಮೇಲುಮನೆ ತಿಮ್ಮಪ್ಪ ಹೆಗ್ಗಡೆಯರು, ಪಡುಬೆಟ್ಟು ಶೇಷ ಸೆಟ್ಟರು, ಮುಂತಾದ ಮಹಾನುಭಾವರು ಸುಖಾಸೀನರಾಗಿ, ಶಾಸ್ತ್ರೋಕ್ತ ರೀತಿಯಿಂದ ತಾಂಬೂಲಚರ್ವಣವಿಧಿಯನ್ನು ಶ್ರದ್ಧಾಪೂರ್ವಕವಾಗಿ ನೆರವೇರಿಸುತಿರುವರು.

ಹಾಳುಹರಟೆಗಳೆಲ್ಲಾ ಮುಗಿದ ಮೇಲೆ, ರಾಯರ ಎದುರು ಕುಳಿತ ಶೇಷ ಸೆಟ್ಟರು—ಎಂದರೆ ನಮ್ಮೂರಿನ ಪ್ರಸಿದ್ಧ ವಾಗ್ಮಿಗಳು. ಆದುದರಿಂದ ಎಷ್ಟೋ ಆಧಾರ ಶ್ಲೋಕಗಳು ಅವರ ಬಾಯೊಳಗೆ ಸಿಲುಕಿ ಒದ್ದಾಡುತಿರುವುವು! ತಮ್ಮ ಎಲೆವಸ್ತ್ರದ ತುದಿಯ ಬೀಗದ ಕೈಯ ಗೊಂಚಲನ್ನು ತಿರುಹುತ್ತ 'ಆ ಮಾತೆಲ್ಲ ಸಾಯಲಿ! 'ಮಾತು ಮಾತು ಪ್ರಸಂಗೇಣ ಗೇಣಿ ಅಕ್ಕಿ ವಿನಶ್ಯತಿ!' ನಮ್ಮ ಮುಂದಿನ ಕೆಲಸ ನೋಡೋಣ' ಎಂದರು.

ಅಷ್ಟಾದ ಮೇಲೆ ರಾಯರೊಮ್ಮೆ ಮುಖವೆತ್ತಿ ಸಭಿಕರೆಲ್ಲರೆಡೆಗೂ ತಮ್ಮ ಕೃಪಾದೃಷ್ಟಿಯನ್ನು ಬೀರಿ, ಗಂಭೀರಭಾವದಿಂದ ನುಡಿದರು—'ಕೆಲಸ ವಿಶೇಷವೇನೂ ಇಲ್ಲ. ಆದರೆ ನಮ್ಮೂರಲ್ಲಿ ಎಷ್ಟೋ ಅನ್ಯಾಯಗಳು ಇತ್ತೀಚೆಗೆ ನಮ್ಮ ಕಣ್ಣೆದುರೇ ನಡೆಯತೊಡಗಿರುವುವು. ಅದಕ್ಕಾಗಿ . . . .'

ಅಷ್ಟರಲ್ಲೇ ಗುತ್ತಿನ ರಾಮಯ್ಯ ಸೆಟ್ಟರು ತಮ್ಮ ನರೆತ ಹುಬ್ಬನ್ನು ಸ್ವಲ್ಪ ಮೇಲೆತ್ತಿ—'ನಮ್ಮೂರಲ್ಲಿ ಅನ್ಯಾಯ! ಹಾಗಾದರೆ ನಾವದನ್ನು ವಿಚಾರಿಸಿಕೊಳ್ಳಲೇಬೇಕು!' ಎಂದರು.

ರಾಯರು ತಮ್ಮ ಪೀಠಿಕೆಯನ್ನು ಮುಂದರಿಸಿದರು. 'ಅಹುದು. ಅದಕ್ಕಾಗಿಯೇ ತಮ್ಮೆಲ್ಲರಿಗೂ ಪ್ರಯಾಸವಾದರೂ ಚಿಂತೆಯಿಲ್ಲವೆಂದು ಕರೆಸಿದುದು!'

'ಪ್ರಯಾಸ! ಪ್ರಯಾಸವೇನು? ನೀವದಕ್ಕಾಗಿ ಇಷ್ಟು ಕೆಲಸ ಮಾಡುವಾಗ ನಮ್ಮಂತಹವರಿಗೆ ಇಲ್ಲಿಯ ತನಕ ಬರಲೂ ಸಾಧ್ಯವಾಗದಿದ್ದರೆ . . .! ಅಪರಾಧಿ ಯಾರವ?' ಎಂದು ಗರ್ಜಿಸಿದರು ಮೇಲುಮನೆ ಹೆಗ್ಗಡೆಯರು.

'ಅವನೇ? ಅವ ನಮ್ಮ ಜಾತಿಯವನೇ! ನಮ್ಮ ಜಾತಿಯಾದರೇನು? ಹೊಲೆಯನಾದರೇನು? ನ್ಯಾಯವೆಲ್ಲರಿಗೂ ಒಂದೇಯಷ್ಟೆ!' ಎಂದು ರಾಯರು ನಸುನಗುತ್ತ ನುಡಿದರು.

'ಸಹಜ; ಸಹಜ!' ಎಂದು ಸಭಿಕರೆಲ್ಲರೂ ತಲೆದೂಗಿ, ರಾಯರ ನ್ಯಾಯಪರತೆಯ ಕುರಿತು ತಮ್ಮತಮ್ಮೊಳಗೆ ಚರ್ಚಿಸತೊಡಗಿದರು. ಅಷ್ಟರಲ್ಲಿ ರಾಯರ ಧ್ವನಿಯು ಅವರೆಲ್ಲರ ಸದ್ದನ್ನಡಗಿಸಿತು. 'ಅದು ಮತ್ತಾರೂ ಅಲ್ಲ; ನಮ್ಮ ಶಾಸ್ತ್ರಿಗಳೇ! ನಮ್ಮ ಪುರೋಹಿತರು! ಬೇರೆ ಯಾರಾದರಾಗಿದ್ದರೆ ನಾನಿಷ್ಟು ಪ್ರಯಾಸಬಡುತಿದ್ದನೇ?'

ಸಭಿಕರೆಲ್ಲರೂ ಆಶ್ಚರ್ಯಗೊಂಡರು. ಹಲವು ಮುಖದಿಂದ ಹೊರಟಿತು ಪ್ರಶ್ನೆ—'ಏನು? ಶಾಸ್ತ್ರಿಗಳು! ನಮ್ಮ ರಾಮಶಾಸ್ತ್ರಿಗಳು! ಏನು ಮಾಡಿದರವರು? ಅದು ಬರೇ ಪಾಪದ ಜನ!'

ರಾಯರು ಸ್ವಲ್ಪ ಕಣ್ಣು ಕೆರಳಿಸಿ ನುಡಿದರು. 'ಪಾಪ! ಪಾಪಿಗಳಾವಾಗಲೂ ನೋಡಲು ಪಾಪವೇ! ನಾನೂ ಮೊದಲು ನಿಮ್ಮ ಹಾಗೆಯೇ ಎಣಿಸಿದ್ದೆ. ಈಗ ತಿಳಿಯಿತಲ್ಲ. ಓದುವುದು ಶಾಸ್ತ್ರ; ಇಕ್ಕುವುದು ಗಾಳ!'

'ಏನು ಮಾಡಿದರವರು?'

'ಮಾಡುವುದೇನು? ಅವರಿಗೊಬ್ಬಳು ಮಗಳು; ದೊಡ್ಡ ಅಪ್ಸರೆ! ಗೊತ್ತಿದೆಯೇ?'

'ಓಹೊ! ಅವಳೇ? ಅವಳ ಹೆಸರೇನು—? ಶಾರದೆ—ಒಳ್ಳೆ ಚೆಂದದ ಹುಡುಗಿ!' ಎಂದು ತರುಣನೊಬ್ಬನು ಆಕರ್ಣಾಂತವದನನಾಗಿ ನುಡಿದನು.

ರಾಯರು ಸ್ವಲ್ಪ ವ್ಯಸ್ತರಾಗಿ 'ಚೆಂದ! ಸುಡುಗಾಡಿನ ಚೆಂದ. ಸೂಳೆಯ ಹಾಗೆ ಶೃಂಗಾರ ಮಾಡಿದರೆ ಮಂಗನ ಮರಿಯೂ ಚೆಂದವಾಗುವುದು. ಅಲ್ಲವೆ ಸೆಟ್ಟರೆ?'

'ಅದು ಸಹಜ. 'ಪ್ರಾಪ್ತೇತು ಷೋಡಶೇ ವರ್ಷೇ ಗರ್ದಭೋಪ್ಯಪ್ಸರಾಯತೆ' ಎಂದು ಹೇಳಿದ್ದಾನೆ ಸರ್ವಜ್ಞ!' ಎಂದು ಶೇಷ ಸೆಟ್ಟರು ಹಳ್ಳಿಗರನ್ನೆಲ್ಲ ಬೆರಗುಗೊಳಿಸಿಬಿಟ್ಟರು. ಎಂತಹ ಅಗಾಧ ಪಾಂಡಿತ್ಯ!

'ಅವಳಿಗೆಷ್ಟು ವಯಸ್ಸು?' ಎಂದು ಕೇಳುತ್ತ ಹೆಗ್ಗಡೆಯವರು ಒಂದು ಚಿಟಿಕೆ ನಸ್ಯವನ್ನು ಬ್ರಹ್ಮರಂಧ್ರಕ್ಕೇರಿಸಿದರು.

'ಸುಮಾರು ಹತ್ತಿರಬಹುದು' ಎಂದನೊಬ್ಬ.

'ಹತ್ತು! ಯಾವ ಲೋಕದ ಹತ್ತು? ಸರಾಸರಿ ಹದಿನಾರು! ನನಗೆ ಗೊತ್ತಿಲ್ಲವೇ? ಆದರೆ . . . ಆದರೆ ಆ ಬ್ರಾಹ್ಮಣನಿಗೆ ಇನ್ನೂ ಮದುವೆ ಮಾಡುವ ಮನಸ್ಸಿಲ್ಲ! ಏನನ್ಯಾಯ! ನಮ್ಮಲ್ಲಿ—ಬ್ರಾಹ್ಮಣರಲ್ಲಿ ಈ ಅನಾಚಾರ!' ಎಂದು ರಾಯರು ನೆಲವನ್ನೊಮ್ಮೆ ಮುಷ್ಟಿಯಿಂದ ಗುದ್ದಿ ನುಡಿದರು.

ಸಭಿಕರೆಲ್ಲರೂ ಸುಮ್ಮನಿದ್ದರು. ರಾಯರ ಮಾತು ಮುಂಬರಿಯಿತು. 'ಅದನ್ನು ನಾವು ನೋಡುತ್ತಾ ಸುಮ್ಮನಿದ್ದರೆ ಊರೇ ಹಾಳಾದೀತು. ಒಬ್ಬ ಮಾಡಿದನೆಂದು ಇನ್ನೊಬ್ಬ ಮಾಡುವುದು. ಮೇಲುಜಾತಿಯವರೇ ಮಾಡಿದ ರಂತೆ; ನಮಗೇನೆಂದು ಬೇರೆಯವರು ಹೇಳುವುದು. ಆದುದರಿಂದ ಈ ಅನಾಚಾರವನ್ನು ನಾವೀಗಲೇ ನಿಲ್ಲಿಸಬೇಕು.'

ತಿಮಪ್ಪ ಹೆಗ್ಗಡೆಯವರು ಮೀಸೆಯ ಮೇಲೆ ಕೈಯಾಡಿಸುತ್ತ 'ಅಹುದು, ಸುಮ್ಮನೆ ಬಿಟ್ಟುಬಿಟ್ಟರೆ ಎಲ್ಲರೂ ಹೀಗೆಯೇ ಕೊಬ್ಬಿಹೋಗುವರು. ಶಾಸ್ತ್ರಿ ಗಳನ್ನು ಈಗಲೇ ಕರೆಸಿ ತಿಳಿಸಿಬಿಡೋಣ' ಎಂದರು.

ರಾಯರು ತಮ್ಮ ದೃಷ್ಟಿಯನ್ನು ಹೆಗ್ಗಡೆಯರ ಮೇಲೆ ಹೊರಳಿಸಿ, 'ಏನು? ತಿಳಿಸುವುದೇ? ನಾನು ಐವತ್ತು ತಡವೆ ಹೇಳಿನೋಡಿದೆ. ಮನಸ್ಸೇ ಇಲ್ಲ; ಆ ಬ್ರಾಹ್ಮಣನಿಗೆ ಮದುವೆ ಮಾಡಲು ಮನಸ್ಸೇ ಇಲ್ಲ. ಹೇಳಿದರೆ ನಾಟುವುದಿಲ್ಲ. ಮತ್ತೆ ಅವನ ಹತ್ತರ ನಾವು ಪೌರೋಹಿತ್ಯ ಮಾಡಿಸು ವುದೇ? ನಮ್ಮ ಪಿತೃಗಳೆಲ್ಲ ನರಕಕ್ಕೆ ಹೋದಾರು!' ಎಂದು ಶೇಷ ಸೆಟ್ಟರನ್ನು ನೋಡಿದರು.

'ಮನುಷ್ಯನಿಗೆ ಯಾವಾಗಲೂ ಆಚಾರಬೇಕು. ಅದೇ ಕೆಟ್ಟ ಮೇಲೆ ಅವ ಬ್ರಾಹ್ಮಣನಾದರೇನು? ಚಂಡಾಲನಾದರೇನು? ಎರಡೂ ಒಂದೇ!' ಎಂದು ಸೆಟ್ಟರು ತಮ್ಮ ಅಭಿಪ್ರಾಯವನ್ನು ಹೊರಗೆಡವಿದರು.

'ಅಲ್ಲವೆ ಮತ್ತೆ? ಆದುದರಿಂದ ಈ ವಿಷಯದಲ್ಲಿ ಏನಾದರೊಂದು ನಿವೃತ್ತಿಯಾಗಲೇ ಬೇಕು.'

'ಸರಿ. ಹಾಗಾದರೆ ಇಪ್ಪತ್ತು ರೂಪಾಯಿ ಅಪರಾಧದ್ರವ್ಯ ನಮ್ಮ ದೇವಸ್ಥಾನಕ್ಕೆ ಹಾಕಬೇಕೆಂದು ಕಟ್ಟುಮಾಡಿಬಿಡೋಣ. ಎಷ್ಟಾದರೂ ಬ್ರಾಹ್ಮಣ!' ಎಂದು ಗುತ್ತಿನ ಸೆಟ್ಟರು ಕನಿಕರದಿಂದ ನುಡಿದರು.

ರಾಯರು ನಗುತ್ತ 'ಅಪರಾಧ! ಆ ರೂಪಾಯಿ ನೀವೇ ಕೊಡ ಬೇಕು.'

'ಏಕೆ?'

'ಅಯ್ಯೋ ಸೆಟ್ಟರೆ! ಅಪರಾಧ ಕೊಡುವನಾದರೆ ಮದುವೆಯನ್ನೇ ಮಾಡುತಿರಲಿಲ್ಲವೆ? ಏನು, ನಮ್ಮ ಊರಲ್ಲಿ ಹುಡುಗರೇ ಇಲ್ಲವೆ? ಹಾಗಾದ ಮೇಲೆ ಅಪರಾಧ ಕೊಡುವ ಗಿರಾಕಿ ಇನ್ನು!'

'ಹಾಗಾದರೆ ಮಾಡುವುದೇನು? ನೀವೇ ಹೇಳಿ.'

ರಾಯರಿಗೆ ಬೇಕಾದುದೂ ಅಷ್ಟೆ. ಗಂಭೀರಭಾವದಿಂದವರು 'ಕೆಡು ವವರು ಕೆಡಲಿ. ಅವರನ್ನು ಉದ್ಧರಿಸಲು ನಮ್ಮಿಂದ ಸಾಧ್ಯವಾಗಲಾರದು. ತೆಂಗಿನ ಮರಕ್ಕೆ ಹತ್ತುವವನನ್ನು ಎಷ್ಟರ ತನಕ ಎತ್ತಲು ಸಾಧ್ಯ? ನಮ್ಮ ಮಟ್ಟಿಗೆ ನಾವು ಒಳ್ಳೆಯ ಸ್ಥಿತಿಯಲ್ಲಿದ್ದರೆ ಸರಿ. ಆದುದರಿಂದ ಆ ಬ್ರಾಹ್ಮಣ—ಬ್ರಾಹ್ಮಣನಲ್ಲ, ಚಾಂಡಾಲ! ಅವನನ್ನು ನಮ್ಮಿಂದ ಹೊರಪಡಿಸುವುದೇ ಲೇಸು. ಅವನಿಂದಾರೂ ಪೌರೋಹಿತ್ಯವನ್ನು ಮಾಡಿಸಲಾಗದು. ಇದೇ ನನ್ನ ಅಭಿಪ್ರಾಯ' ಎಂದರು.

ರಾಯರ ಮಾತೇ ಕೊನೆಯದು. ಅದೇ ಸಿದ್ಧಾಂತ! ಸಭೆಯು ಮುಗಿಯಿತು. ಶಾಸ್ತ್ರಿಗಳ ಗುಣಗಳಿಗೆ ಮನಸೋತ ಹಳ್ಳಿಗರೆಲ್ಲರೂ ಈ ನಿರ್ಧಾರದಿಂದ ಮನನೊಂದು ಮಾತಿಲ್ಲದೆ ಹೊರಟುಹೋದರು. ಆದರೆ ತರುಣನೊಬ್ಬನು ತನ್ನ ಸಂಗಡಿಗರೊಡನೆ 'ಪಾಪ! ಅಂತೂ ಆ ಬಡ ಬ್ರಾಹ್ಮಣನನ್ನು ಓಡಿಸುವ ಉಪಾಯವಿದು. ಇಲ್ಲವಾದರೆ ದಂಡವನ್ನು ವಿಧಿಸುವಾಗ ಅಪರಾಧಿಯನ್ನು ಕರೆದು ವಿಚಾರಿಸುವುದು ಬೇಡವೆ? ಇದಾವ ನ್ಯಾಯ? ದೊಡ್ಡವರು ಮಾಡಿದ್ದೆಲ್ಲಾ ಸರಿ. ಕೇಳುವವರಾರು?' ಎಂದು ಗುಣುಗುಟ್ಟಿದನು. ಅದು ರಾಯರಿಗೆ ತಿಳಿಯಿತೋ ಏನೋ, ತಿಳಿಯದು! ಕೊನೆಗೆ ವಿಚಾರಿಸುವಾಗ, ಅದು ನಮ್ಮ ಮನೆಯಾಳು ತಿಮ್ಮಪ್ಪನಲ್ಲದೆ ಮತ್ತಾರೂ ಅಲ್ಲ. ಬೊಂಬಾಯಿಗೆ ಹೋಗಿ, ಎರಡು ತಿಂಗಳು ಕಾಫಿ ಹೋಟಲಲ್ಲಿ ಇದ್ದುದರಿಂದಲೇ ಅವನಿಗಷ್ಟು ಎದೆಗಾರಿಕೆ!

೨.

ಪರಿವರ್ತನಶೀಲವಾದ ಪ್ರಪಂಚದಲ್ಲಿ ತಾನು ಸಿರಿವಂತನೆಂದು ಹೆಗ್ಗಳಿಸಿಕೊಳ್ಳುವ ಸಾಹಸವಾರಿಗಿದೆ? ಸಿರಿತನದ ತೂಗುಯ್ಯಾಲೆಯು ಹಿಂದೆ ಸಾರುವುದರೊಳಗಾಗಿ ಬಡತನವು ತಡೆಹಾಯ್ದು ತಬ್ಬುತಿರುವುದು. ಅಂದ ಬಳಿಕ ಸಿರಿವಂತರಾರು? ಬಡವರಾರು?

ರಾಮಶಾಸ್ತ್ರಿಗಳು ನಮ್ಮ ಕಣ್ಣೆದಿರಿರುವ ತನಕ ಈ ತತ್ವವನ್ನಾರೂ ನಮಗೆ ತಿಳಿಸಬೇಕಾಗಿಲ್ಲ. ಅವರ ಭಾಗ್ಯರೇಖೆಯೊಂದು ಮಲಿನವಾಗದಿರುತಿದ್ದರೆ ರಾಜನಂತಿರಬಹುದಿತ್ತು ಅವರಿಗೆ! ಆದರೆ ಅವರ ಹಣೆಬರಹದ ವಿಧಾನವೇ ಬೇರೆ. ಪಾಪ! ಅವರದೇನು ತಪ್ಪು? ಶಾಸ್ತ್ರಿಗಳ ತೀರ್ಥರೂಪರು ರಾಯರ ಮನೆತನದವರೊಂದಿಗೆ ಒಂದು ವ್ಯಾಜ್ಯದಲ್ಲಿ ಸೋತು ಸರ್ವಸ್ವವನ್ನೂ ಕಳೆದುಕೊಳ್ಳಬೇಕಾಗಿ ಬಂದಿತು. ಆದರೆ ಅವರು ಪುಣ್ಯಾತ್ಮ. ಅಷ್ಟರಲ್ಲೇ ಯಮನು ಅವರ ಮೇಲೆ ಕನಿಕರಗೊಂಡನು. ಅದರ ಫಲವನ್ನೀಗ ಅನುಭವಿಸುವವರು ರಾಮಶಾಸ್ತ್ರಿಗಳು. ಸಾಲಕ್ಕಾಗಿ ಮೂಲವೆಲ್ಲಾ ಕಳೆದು, ಈಗ ಉಳಿದುದೆಂದರೆ ಹಳೆಯ ಮನೆಯೊಂದು ಮಾತ್ರ.

ನಮ್ಮ ಹಳ್ಳಿಯ ಪೌರೋಹಿತ್ಯವು ಶಾಸ್ತ್ರಿಗಳ ಮನೆತನಕ್ಕೆ ಸಂದುದು. ಭಾಗ್ಯದೇವತೆಯು ಮುನಿದಿರದ ಕಾಲದಲ್ಲಿ, ಆ ಹರಟೆಯ ಕೆಲಸವೊಂದು ಇತರರ ಕೊರಳಿಗೆ ಗಂಟುಬಿದ್ದಿದ್ದಿತು. ಆದರೆ ಇಂದು, ಆ ಹರಟೆಯೊಂದೇ ಶಾಸ್ತ್ರಿಗಳಿಗೆ ಆಧಾರಸ್ವರೂಪವಾದುದು. ಒಂದೇ ಒಂದಾದ ಆ ಆಧಾರವು ಕೈಬಿಡುವುದಾದರೆ ಶಾಸ್ತ್ರಿಗಳ ಜೀವನವು ನಿರಾಶಾಮಯವಾದುದು.

ಶಾಸ್ತ್ರಿಗಳದು ಚಿಕ್ಕ ಸಂಸಾರ. ಇತರರಂತೆ ಹತ್ತಿಪ್ಪತ್ತು ಮಕ್ಕಳ ಪೀಡನೆಯು ಅವರ ಪಾಲಿಗಿಲ್ಲ. ಪೂರ್ವದಿಂದಲೂ ಒಂದೇ ಗಂಡು ಸಂತತಿಯು ಅವರ ಕುಲದಲ್ಲಿ. ಮಗಳೊಬ್ಬಳ ಮೊಗ ನೋಡಬೇಕೆಂಬ ಬಯಕೆಗಾಗಿ ಹಿರಿಯರು ದೇವರಿಗೆ ತೆತ್ತ ಹರಕೆ ಕಾಣಿಕೆಗಳಿಗೆ ಲೆಕ್ಕವಿಲ್ಲ. ಆ ಹಿರಿಯರ ಹರಕೆ ಕಾಣಿಕೆಗಳ ಬಲದಿಂದ ದೇವನ ಅನುಗ್ರಹಾತ್ಮಕ ಬುದ್ಧಿಯು ಒಲಿದುದು ನಮ್ಮ ಶಾಸ್ತ್ರಿಗಳ ಕಾಲದಲ್ಲಿ. ದೇವನಿಗೆ ದೀನರ ಮೇಲೆಷ್ಟು ಕನಿಕರ! ಅದೂ ದುರ್ದಶೆಯ ಕಾಲದಲ್ಲಿ!

ಶಾರದೆಗಿಂತ ರಘುರಾಮನು ಆರು ವರುಷಗಳಿಗೆ ಹಿರಿಯವನು. ಅವನಿಗೀಗ ವಯಸ್ಸು ೧೯. ಶಾಸ್ತ್ರಿಗಳು ತಮ್ಮ ದುಸ್ಥಿತಿಯಲ್ಲಿಯೂ ಮಗನ ವಿದ್ಯಾಭ್ಯಾಸದ ಅಭಿರುಚಿಯನ್ನು ತೋಯ್ಸು ಬಿಡಲೆಣಿಸಲಿಲ್ಲ. 'ನಾನು ಈ ಹಳ್ಳಿಯಲ್ಲಿ ಬಿದ್ದಿರುವೆನೆಂದು ನನ್ನ ಮಗನು ಎಂದಿಗೂ ಇಲ್ಲಿ ಇರಲಾರನು. ಆದಕ್ಕಾಗಿ ಅವನ ಮುಂದಿನ ಜೀವನದ ಒಂದು ದಾರಿಯನ್ನು ತೋರಿಸಿಬಿಡುವೆನು. ಆ ಮೇಲಿನದು ಅವನ ಅದೃಷ್ಟ' ಎಂದು ನುಡಿದು ಅವನಿಗೆ ಹೈಸ್ಕೂಲಿನ ವಿದ್ಯೆಯನ್ನು ಎಂತಾದರೂ ಕಲಿಸಿದರು. ಇನ್ನು ಮುಂದೇನು? ಮಗನನ್ನು ಕೋಲೇಜಿಗೆ ಕಳುಹಿ ಆ ವೆಚ್ಚವನ್ನು ಸಹಿಸಿಕೊಳ್ಳುವಷ್ಟು ತ್ರಾಣವು ಶಾಸ್ತ್ರಿಗಳಿಗಿಲ್ಲ. ಆದುದರಿಂದ ರಘುವು ನಿರಾಶನಾದನು. ಆದರೆ–ಆ ನಿರಾಶೆಯ ಕತ್ತಲಲ್ಲೂ ಆಶೆಯ ಮಿಂಚುವಳ್ಳಿಯೊಂದು ಮಿನುಗಿತು.

ಮಂಗಳೂರಿನ ಪ್ರಸಿದ್ಧ ಸಾಹುಕಾರರಾದ ವಿಶ್ವನಾಥರಾಯರಿಗೂ ಶಾಸ್ತ್ರಿಗಳ ಮನೆತನಕ್ಕೂ ಅದೇನೋ ಒಂದು ನಿಕಟ ಸಂಬಂಧ. ಶಾಸ್ತ್ರಿಗಳ ಮಹತ್ವದ ಕಾಲದಲ್ಲಿ, ಆ ಎರಡು ಮನೆತನಗಳ ಸಮ್ಮೇಲನವು ಸ್ವಾಭಾವಿಕವಾಗಿ ನಡೆಯುತಿತ್ತು. ಆ ಸಂಬಂಧವು ಬಡತನದ ಬಿಸಿಲಿನಿಂದ ಒಣಗಿ ಹೋಗಲಿಲ್ಲ. ವಿಶ್ವನಾಥರಾಯರ ಮಗ ರಮಾನಂದನು ಕೈಗೊಟ್ಟು, ಸಕಾಲದಲ್ಲಿ ಶಾಸ್ತ್ರಿಗಳ ತಲೆಯ ಮೇಲಿನ ಒಂದು ಹೊರೆಯನ್ನಿಳಿಸಿದನು. ಎರಡು ವರ್ಷಗಳಿಂದ ರಘುವು ಮಂಗಳೂರಲ್ಲೆ ಸಾಹುಕಾರರ ಮನೆತನದೊಂದಿಗೆ ಬೆರತು, ತನ್ನ ವಿದ್ಯೆಯನ್ನು ತಡಿಗಾಣಿಸುತಿರುವನು.

ಶಾಸ್ತ್ರಿಗಳ ಜೀವನ ಸಮಸ್ಯೆಯು ಲಘುವಾದಷ್ಟು ಶಾರದೆಯ ಯೌವನವು ಅದನ್ನು ಬಿಗಿಯುತಿರುವುದು. ಅವಳಿಗಿಂದು ಹದಿಮೂರು ವರುಷ. ಆದರಿನ್ನೂ ಅವಿವಾಹಿತಳು. ನೈಷ್ಠಿಕರ ಸಮ್ಮುಖದಲ್ಲಿ, ಅದೆಂತಹ ಅಪರಾಧ!

ಆದರೆ ಶಾಸ್ತ್ರಿಗಳ ನಿರ್ಧಾರವು ಅದೊಂದೇ—'ಮಗಳು ಕೊನೆಯ ತನಕವೂ ಅವಿವಾಹಿತಳಾಗಿ ಸತ್ತರೂ ಚಿಂತಿಲ್ಲ; ಆದರೂ ಅಯೋಗ್ಯನಿಗೆಂದಿಗೂ ಧಾರೆಯೆರೆದೀಯಲಾರೆ'ನೆಂಬ ಆ ನಿರ್ಧಾರವನ್ನು ಎಂತಹ ಗಂಡಾಂತರಗಳೂ ಬೀಳ್ಗೆಡಹಲಾರವು. ಅಂತಹ ನಿರ್ಧಾರವನ್ನು ಕಡೆಗಾಣಿಸುವುದಾದರೆ, ಸುರಸುಂದರಿಗೆ ವರನೊಬ್ಬನು ದೊರೆಯಲಾರನೇ?

ತಮ್ಮ ಹಿರಿತನದ ಹೆಗ್ಗಳಿಕೆಯ ಹೊರೆಯನ್ನು ತೊರೆದು, ಸ್ವಯಂ ಶಂಕರ ರಾಯರೇ ಮುಂಬರಿದು ಕನ್ಯೆಯನ್ನು ಯಾಚಿಸುವಂದು, ಯಾವನು ನಗು ಮೊಗದಿಂದ ಮಗಳನ್ನು ಅರ್ಪಿಸಿಬಿಡುತಿರಲಿಲ್ಲ? ಶಾಸ್ತ್ರಿಗಳ ಅಭಿಮಾನವು ಮಾತ್ರ, ಅಷ್ಟು ಕಿರಿದಾದುದಲ್ಲ. ಧೂರ್ತನೊಬ್ಬನನ್ನು ಜಾಮಾತನೆಂದು ಆದರಿಸುವಷ್ಟು ನಿಸ್ಸತ್ವವಾದುದಲ್ಲ.

ಏನಿದನ್ಯಾಯ! ಹೆರರನ್ನು ಪೀಡಿಸದೆ ನೆಮ್ಮದಿಯಿಂದ ಬಾಳುತಿರುವವ ನಿಗಿಂದು ಬಹಿಷ್ಕಾರದ ಬಂಧನ! ಸ್ವಾರ್ಥ ಸಂಕೋಚ ಭಾವನೆಯಿಂದ, ಹೆರರ ಪಾಡುಗೆಡಿಸುವುದರಲ್ಲೆ ನಿರಂತರವೂ ನಿರತನಾಗಿರುವವನಿಗಿಂದು ಜಗ ತ್ಪೂಜ್ಯತೆ!

ಶಾಸ್ತ್ರಿಗಳು ತಮ್ಮಲ್ಲೆ ನುಡಿದುಕೊಂಡರು—'ಶಂಕರ! ಇಂತಹ ಬಹಿ ಷ್ಕಾರದ ನೆಪದಿಂದ ನನ್ನ ಮಗಳನ್ನು ಹೊಂದುವೆನೆಂದು ನೀನು ಭಾವಿಸುವೆ ಯಾದರೆ, ಅದು ನಿಜವಾಗಿಯೂ ನಿನ್ನ ಹುಚ್ಚುತನ! ಇಂತಹ ಸಾವಿರಾರು ಬಹಿಷ್ಕಾರಗಳ ಬೆಂಕಿಯ ಬೆದರಿಕೆಗಾಗಿ ರಾಮುಶಾಸ್ತ್ರಿಯು ಅಭಿಮಾನವನ್ನು ಒತ್ತೆ ಇಡುವವನಲ್ಲ!'

ಆದರೆ ಅಂತಹ ಒಣ ಅಭಿಮಾನದಿಂದೇನು ಪ್ರಯೋಜನ? ಅದನ್ಯಾರು ಕೇಳುವರು? ಶಾಸ್ತ್ರಿಗಳ ಒಂದೇ ಒಂದಾದ ಜೀವನಮಾರ್ಗವು ಬಹಿಷ್ಕಾರ ದಿಂದ ಮಾಸಿಹೋಯಿತು. ಹಾಗಾದರೆ ಮುಂದೇನು ಗತಿ?

ಸಂಜೆಯ ಸಮಯ, ಶಾಸ್ತ್ರಿಗಳು ವ್ಯಾಕುಲಚಿತ್ತರಾಗಿ ಪಂಚಾಂಗದ ಪುಟವನ್ನು ಮಗುಚುತ್ತ ಕುಳಿತಿದ್ದರು. ಅಷ್ಟರಲ್ಲಿ ಟಪ್ಪಾಲಿನವನು ಕಾಗದ ವೊಂದನ್ನು ಕೊಟ್ಟುಹೋದನು. ಈ ಜೀವಿಲೋಕದಲ್ಲಿ ಶಾಸ್ತ್ರಿಗಳಿಗೆ ಕಾಗದ ಹಾಕುವವನಿದ್ದರೆ—ಅದು ಅವರ ಮಗನೊಬ್ಬನೇ ಸರಿ. ಆದುದರಿಂದ ಆ ಕಾಗದವಾರದೆಂದು ಊಹಿಸಲು ಶಾಸ್ತ್ರಿಗಳಿಗೆ ಹೆಚ್ಚು ತೊಡ ಕಾಗಲಿಲ್ಲ.

ಕಾಗದವನ್ನೊಮ್ಮೆ ಓದಿದರು. ಅವರ ಕಣ್ಣುಗಳು ಆ ಅಕ್ಷರಗಳನ್ನು ನಂಬಲಾರವು. ಕನ್ನಡಕವನ್ನು ಮೂಗಿಗೇರಿಸಿ ಮತ್ತೊಮ್ಮೆ ಓದಿದರು. ಇದೇನು ಮಗನ ಕಾಗದವೇ ಅಥವಾ ಸ್ವರ್ಗೀಯ ಸಂದೇಶವೇ?

ಆ ಸಂತೋಷಸಮಾಚಾರವನ್ನು ಹುದುಗಿಸಿಡಲು ಅವರ ಹೃದಯ ದಾಳವು ಕಿರಿದಾಯಿತು. ಆದುದರಿಂದ ಅದನ್ನು ಹೊರಗೆಡಹಲು 'ಆಕೆ'ಯ ಬಳಿಗೆ ಓಡಿ 'ನೋಡಾ! ರಘು ಕಾಗದ ಬರೆದಿದ್ದಾನೆ' ಎಂದರು.

ಪಾತ್ರ ತೊಳೆಯುತ್ತಿದ್ದ ಪುಟ್ಟಮ್ಮನವರು ಅದನ್ನು ಅಲ್ಲಿಯೆ ಬಿಟ್ಟು 'ಏನು ಸಮಾಚಾರ?' ಎಂದರು.

'ನಾವು ಕೂಡಲೇ ಅಲ್ಲಿಗೆ ಹೊರಟು ಬರಬೇಕಂತೆ.'

'ಏನು? ನಾವೇ! ಏಕೆ? ಅವನಿಗೇನಾದರೂ ಅಸ್ವಸ್ಥವೇ?'

'ಹಾಗೇನಿಲ್ಲಪ್ಪ. ಸಾಹುಕಾರರ ತಾಯಿ–ಪಾಪ! ಮೊನ್ನೆ ತೀರಿಹೋದ ರಂತೆ. ಸಾಹುಕಾರರು ಹೇಳಿದರಂತೆ ರಘು ಹತ್ತರ 'ರಘು! ತಾಯಿ ತೀರಿ ಹೋದರು. ಇನ್ನು ಮನೆ ವಿಚಾರ ತೆಗೆದುಕೊಳ್ಳಲು ಯಾರೂ ಇಲ್ಲ. ನನಗೆ ಅಂಗಡಿಯಲ್ಲೇ ಕೆಲಸ. ಆದುದರಿಂದ ನೀನು ಕೂಡಲೇ ಊರಿಗೆ ಹೋಗಿ ನಿನ್ನ ತಂದೆತಾಯಿಗಳನ್ನು ಹೇಗಾದರೂ ಮಾಡಿ ಒಪ್ಪಿಸಿ ಕರೆದು ಕೊಂಡು ಬರಲೇಬೇಕು. ಅವರು ನನ್ನಲ್ಲಿದ್ದರೆ ನನಗೆಷ್ಟೋ ಅನುಕೂಲ' ಎಂದರಂತೆ.

'ಅದಕ್ಕೆ?'

'ಅದಕ್ಕೆ—'ನಾನು ಹೋಗುವುದು ಬೇಡ. ಕಾಗದ ಹಾಕಿದರೆ ಬಂದಾರು' ಎಂದನಂತೆ. ಇಲ್ಲವಾದರೆ ಸಾಹುಕಾರರೇ ಹೊರಟುಬರುವ ರಂತೆ!'

ನಿಜವಾಗಿಯೂ ಎಂತಹ ಸಂತೋಷದ ಸಮಾಚಾರವಿದು! ಕತ್ತಲೆಯ ಕಾಡಿನಲ್ಲಿ—ಇಂತಹ ಕೈವೆಳಗೊಂದು ದಾರಿತೋರುವುದೆಂದು ಆ ವೃದ್ಧ ದಂಪತಿಗಳು ಎಂದಾದರೂ ಎಣಿಸಿದ್ದರೆ?

೩.

ರಾಮಶಾಸ್ತ್ರಿಗಳ ಕುಟುಂಬವು ಬಂದು ಸೇರಿದಂದಿನಿಂದ ರಮಾ ನಂದನ ಹೃದಯದಲ್ಲಿ ಹೊಸಬೆಳಕೊಂದು ಬೆಳಗತೊಡಗಿತು. ಅವರ ಸರಳ ಜೀವನವು ಅವನನ್ನು ಮುಗ್ಧಗೊಳಿಸಿತು. ಬಿಡುವಿದ್ದಾಗಲೆಲ್ಲ ಅವನು

ಅವರ ಸರಸಗೋಷ್ಠಿಯಲ್ಲಿ ಬೆರತು ಕಾಲಹರಣಮಾಡುತಿದ್ದನು. ಅವನ ಅಂತಹ ಭಕ್ತಿಭಾವನೆಯನ್ನು ಕಂಡು ವೃದ್ಧದಂಪತಿಗಳು 'ಆಹಾ! ಈ ಕಲಿ ಯುಗದಲ್ಲಿಯೂ ಇಂತಹ ಹುಡುಗರಿರುವರೇ!' ಎಂದು ತಲೆದೂಗುತಿದ್ದರು.

ರಮಾನಂದನಿಗೆ ಅವನ ಹಿಂದಿನ ಜೀವನ ಚರಿತ್ರೆಯನ್ನು ಕೇಳುವುದ ರಲ್ಲಿ ಬೇಸರವೇಯಿದ್ದಿಲ್ಲ. ಪುಟ್ಟಮ್ಮನವರು, ಶಂಕರರಾಯನು ಶಾರದೆ ಯನ್ನು ಬಯಸಿದುದನ್ನೂ ಅದಕ್ಕಾಗಿ ಮಾಡಿದ ಅಪಚಾರಗಳನ್ನೂ ವಿವ ರಿಸುವಂದು ಅವನು ಕುತೂಹಲದಿಂದ 'ಶಾರದೆಗೆ ಅವನನ್ನು ವರಿಸಲು ಇಷ್ಟವಿದ್ದಿತೇ?' ಎಂದು ಕೇಳಿ ಹುಡುಗಿಯ ಮುಖವನ್ನು ತಿರುಗಿ ನೋಡಿ ದನು. ಹುಡುಗಿಯು ಅತ್ತಳು. ಕಂಬನಿಗಳು ಅವಳ ಕಪೋಲದಿಂದ ಹೊರಳಿಬಿದ್ದುವು. ಆ ದೃಶ್ಯವೊಂದು, ಅವನ ಹೃದಯವನ್ನು ಸೂರೆಗೊಂಡು ಸೆಳೆದುಬಿಟ್ಟಿತು! ಎಂದೆಂದಿಗೂ ಅಚ್ಚಳಿಯದ ದೃಶ್ಯವದು!

ಹಲವು ಮಾಸಗಳು ಕಳೆದುಹೋದವು. ಶಾಸ್ತ್ರಿಗಳಿಗೆ ಈಗಿನಂತಹ ನಿರಾಪದವಾದ ಪ್ರದೇಶವು ಇನ್ನೆಲ್ಲಿಯೂ ದೊರೆಯಲಾರದು. ಆದರೂ ಅವ್ಯಕ್ತವಾದ ಕೊರತೆಯೊಂದು ಅವರ ಹೃದಯವನ್ನು ಕೊರೆಯುತಿದ್ದಿತು. ಸ್ವಸುಖಸಾಧನೆಯೊಂದೇ ಅವರ ಗುರಿಯಾಗಿರುತಿದ್ದರೆ, ಅವರಿಗಿಷ್ಟು ಕಷ್ಟವೇ ಇದ್ದಿರಲಿಲ್ಲ. ಸ್ವಸುಖದ ಚಿಂತೆಯಳಿದರೂ ಮಗಳ ವಿವಾಹದ ಚಿಂತೆ ಯೊಂದು ಹೆಚ್ಚುತಿದ್ದುದರಿಂದ ಅವರು ಕಳವಳಗೊಳ್ಳುತಿದ್ದರು.

ಪುಟ್ಟಮ್ಮನವರು ಹಲವು ತಡವೆ ಮಗನೊಡನೆ ಆ ವಿಚಾರವನ್ನೆತ್ತಿ ದರು. ಆದರವನು 'ಅದೇಕಮ್ಮ ಅಷ್ಟು ಅವಸರ? ನಾನು ಸಾಹುಕಾರ ರೊಡನೆ ಕೇಳಿದಾಗ ಅವರೂ ಹಾಗೆಯೇ ಹೇಳಿದರು. 'ಯೋಗ್ಯವರ ಸಿಕ್ಕಿ ದೊಡನೆ ಮಾಡಿಬಿಡೋಣ. ಅವಸರವೇನು?' ಎಂದರು. 'ಅವಸರಗೊಂಡು ಕೆಲಸವನ್ನು ಕೆಡಿಸುವುದೇಕೆ?' ಎನ್ನುತಿದ್ದನು.

ಒಂದು ದಿನ ಸಂಜೆ, ರಮಾನಂದ, ರಘು–ಇವರಿಬ್ಬರೇ ಮಹಡಿಯಲ್ಲಿ ಕುಳಿತು ಏನೋ ಮಾತಾಡುತಿದ್ದರು. ಬಹಳ ಹೊತ್ತಾದ ಮೇಲೆ ರಮಾ ನಂದನು ಕೆಳಗಿಳಿದು ಅಂಗಡಿಗೆ ಹೊರಟುಹೋದನು. ಅನಂತರ ರಘುವೂ ತಾಯಿಯೆಡೆಗೆ ಓಡುತ್ತ ಬಂದು,—

'ಅಮ್ಮಾ! ನಮ್ಮ ಸಾಹುಕಾರರಿಗೆ ಮದುವೆಯಾಗುವುದಂತೆ' ಎಂದನು.

ಪುಟ್ಟಮ್ಮನವರು ಸಂತೋಷದಿಂದ 'ಯಾವಾಗ ಮಗೂ?' ಎಂದು ಕೇಳಿದರು.

'ಸದ್ಯದಲ್ಲೇ.'

ಅಷ್ಟರಲ್ಲಿ ಪಕ್ಕದ ಕೋಣೆಯಲ್ಲಿ ಕುಳಿತಿದ್ದ ಶಾರದೆಯು ಓಡಿಬಂದು, 'ಹುಡುಗಿ ಯಾವುದಣ್ಣಾ?' ಎಂದಳು. ಅವಳ ಸ್ವರವು ಮಾತ್ರ ಎಂದಿನಂತಿದ್ದಿರಲಿಲ್ಲ. ಕಾತರತೆಯಿಂದ ಕಂಪಿಸುತಿದ್ದಿತು.

ರಘುವು ಅದಕ್ಕುತ್ತರಗೊಡದೆ 'ಅಮ್ಮಾ! ನಮ್ಮ ಶಾರಿಗೂ ಮದುವೆಯಾಗುವುದಂತೆ' ಎಂದನು.

'ನಮ್ಮ ಶಾರಿಗೆ! ಗಂಡಯಾರು?'

'ಇವಳಿಗೆ ಅವರು—ಅವರಿಗೆ ಇವಳು'—ಎಂದು ತಂಗಿಯ ಕಡೆಗೆ ತಿರುಗಿ ನಗತೊಡಗಿದನು.

ಶಾರದೆಯು ಹೃದಯದ ಉದ್ವೇಗವನ್ನು ತಡೆಯಲಾರದೆ, ಅವನ ಬೆನ್ನಿಗೊಂದು ಬಲವಾದ ಗುದ್ದು ಕೊಟ್ಟು ಓಡಿಹೋಗಿ, ಕೋಣೆಯ ಬಾಗಲನ್ನು ಹಾಕಿಕೊಂಡಳು. ರಘುವು ಅಷ್ಟರಲ್ಲೇ ಬಿಡದೆ, ಕೋಣೆಯ ಕಿಟಿಕಿಯ ಬಳಿಗೆ ಹೋಗಿ 'ಬರಲಿ ಅವರು; ಹೇಳ್ತೇನೆ ನೋಡು!' ಎಂದನು.

'ನೋಡು! ಬೇಡ ನಿನಗೆ!' ಎಂದು ಹುಡುಗಿಯು ಒಳಗಿನಿಂದಲೇ ಕೂಗಿದಳು.

ರಘುವು 'ಬೇಡ? ಮಾಡ್ತೇನೆ ಬಗೆ! ಬಾರೀ ಜೋರಾಗಿದ್ದಿ ನೀನು!' ಎಂದು ನಗುತ್ತ ಅಲ್ಲಿಂದ ಹೊರಟುಹೋದನು.

೪.

ಹಲವು ವರ್ಷಗಳ ಮೇಲೆ ರಾಮುಶಾಸ್ತ್ರಿಗಳು ಪುನಃ ತಮ್ಮೂರಿಗೆ ಬಂದರೆಂಬ ವದಂತಿಯು ಎಲ್ಲೆಲ್ಲಿಯೂ ಹಬ್ಬಿಬಿಟ್ಟಿತು. ಅವರ ಇಂದಿನ ಪ್ರತಿಷ್ಠೆಯನ್ನು ಕೇಳಿದ ಹಳ್ಳಿಗರೆಲ್ಲರೂ ಅವರನ್ನು ನೋಡಲೆಂದು ಒಂದೇಸವನೆ ಬರುತಿದ್ದರು.

ಶಾಸ್ತ್ರಿಗಳು ತಿರುಗಿ ಬರುವುದರೊಳಗಾಗಿ ನಮ್ಮ ಹಳ್ಳಿಯಲ್ಲಿ ಎಷ್ಟೋ ಮಾರ್ಪಾಟಗಳು ನಡೆದುಹೋಗಿದ್ದುವು. ದುಂದುಗಾರಿಕೆಯ ಫಲವಾಗಿ ನಮ್ಮ ರಾಯರ ಸ್ಥಿತಿಯು ಬಹಳ ಕ್ಷೀಣ ದೆಸೆಗೆ ಬಂದಿದ್ದುದರಿಂದಲೇ ಅವರ ಪ್ರತಾಪಸೂರ್ಯನೂ ನಿಸ್ತೇಜನಾಗಿ ಕುಂದುತ್ತ ಬಂದಿದ್ದನು. ಆದುದರಿಂದಲೇ ಮೊದಲಿನ ಚಿತ್ರಚರಿತ್ರೆಗಳ ವರ್ಣನೆಯು ಬಹುತರವಾಗಿ ಮಾಸುತ್ತ ಬಂದಿದ್ದಿತು. ಹಳ್ಳಿಗರು 'ಕಲಿಯುಗದಲ್ಲಿ ಅನ್ಯಾಯದ ಫಲ ಆ ಕೂಡಲೇ ಸಿಕ್ಕುವುದೆಂಬುದಕ್ಕೆ ಇದೇ ದೃಷ್ಟಾಂತ' ಎಂದು ಅಲ್ಲಲ್ಲಿ ನುಡಿಯುತಿದ್ದರು.

ಶಾಸ್ತ್ರಿಗಳು ಊರಿಗೆ ಬಂದವರು ನಮ್ಮ ಮನೆಗೆ ಬಾರದಿರಲಿಲ್ಲ. ಅವರ ಮಹತ್ವದ ಕೀರ್ತಿಯು ಎಷ್ಟೇ ಬೆಳಗುತಿದ್ದರೂ ಅವರ ಜೀವನವು ನಮ್ಮ ಊರ ಗಡಿಯಲ್ಲಿ ಹರಿವ ಹೊಳೆಯಂತೆ ಸರಳವಾಗಿಯೇ ಇದ್ದಿತು. ಅವರ ವೇಷಭೂಷಣಗಳಲ್ಲಿ ನಾಗರಿಕತೆಯ ಅಚ್ಚೇನೂ ಮೂಡಿದ್ದಿರಲಿಲ್ಲ. ಪೇಟೆಯ ಬಿರುಗಾಳಿಯು ಅವರನ್ನು ಸೋಂಕಿಲ್ಲವೆಂದು ತೋರುವುದು.

ನೆರೆದಿದ್ದ ಹಳ್ಳಿಗರೆಲ್ಲರೂ ಅವರ ಮುಖದಿಂದ ಏಕಧಾರೆಯಾಗಿ ಹೊರಸೂಸುವ ಮಂಗಳೂರ ವೈಭವರಾಶಿಯ ವರ್ಣನೆಯನ್ನು ಕುರುಕ್ಷೇತ್ರದ ಅರ್ಜುನನಿಗಿಂತಲೂ ನೂರ್ಮಡಿಯಾಗಿ ಬೆರಗುಗೊಂಡು, ನಿಶ್ಚಲಚಿತ್ತರಾಗಿ ಸವಿದು, ಸವಿದು, ರೋಮಾಂಚಿತರಾಗುತಿದ್ದರು. ಎಷ್ಟೋ ವಿಚಾರಗಳ ವಿಮರ್ಶೆಗಳು ನಡೆದ ಮೇಲೆ, ನಾನು ನಸುನಗುತ್ತ 'ಶಾಸ್ತ್ರಿಗಳೇ! ನೀವು ನಮ್ಮ ಶಂಕರರಾಯರಿಗೆ ಎಷ್ಟು ಋಣಿಗಳಾಗಿರಬೇಕಾಗಿಲ್ಲ! ಅವರ ಬಹಿಷ್ಕಾರದಿಂದಾಗಿಯಲ್ಲವೆ ನಿಮಗೀ ಮಹತ್ವ? ಇಲ್ಲವಾದರೆ ನೀವು ಈ ಊರನ್ನು ಬಿಟ್ಟು ಹೊರಡುತಿದ್ದಿರೆ?' ಎಂದೆನು.

ಅದಕ್ಕವರು ಸ್ವಲ್ಪ ಗಂಭೀರಭಾವದಿಂದ 'ಅದೇನು? ಅದೆಲ್ಲವೂ ಅವರವರ ಹಣೆಬರಹ! ಎಲ್ಲವೂ ಭಗವತ್ಸಂಕಲ್ಪದಂತೆ! ಅವನು ಕತ್ತಿದಿಟ್ಟಿರುವ ಮಾರ್ಗದಲ್ಲೇ ಮನುಷ್ಯನು ಮುಂಬರಿವನಲ್ಲದೆ ಸ್ವಂತ ಮಾರ್ಗದಲ್ಲಿಯಲ್ಲ. ಈ ವಿಶ್ವರಂಗದಲ್ಲಿ ಭಗವಂತನೇ ಸೂತ್ರಧಾರನು. ನಾವೆಲ್ಲರೂ ಅವನ ಸಂಕಲ್ಪದಂತೆ ನಲಿವ ನಟರು. ಅಂದ ಬಳಿಕ ನಮ್ಮದೇನು ಹೆಚ್ಚುಗಾರಿಕೆ? ಹಾಗಲ್ಲದಿದ್ದರೆ, ಈ ಊರನ್ನು ಬಿಟ್ಟು ತೆರಳುವೆನೆಂದು

ನಾನೆಂದಿಗೂ ಎಣಿಸಿದ್ದೆನೆ? ಎಲ್ಲವೂ ಅವನ ಬರಹದಂತೆ' ಎಂದು ನುಡಿದು ದೊಡ್ಡ ವೇದಾಂತದ ಹೊರೆಯನ್ನು ನನ್ನ ತಲೆಯ ಮೇಲಿರಿಸಿಬಿಟ್ಟರು.

ಶಾಸ್ತ್ರಿಗಳು ಹೇಳಿದ ವಿಷಯವೇನೋ ಸಹಜ. ಆದರೆ ನನಗೂ ಅವರಿಗೂ ಇರುವ ಮತಭೇದವಿಷ್ಟೆ: ಶಾಸ್ತ್ರಿಗಳು ತಮ್ಮ ಕಾರ್ಯದ ಪ್ರಶಸ್ತಿಯನ್ನು 'ಹಣೆಬರಹ–ದೈವಸಂಕಲ್ಪ'ದ ಮೇಲೆ ಹೊರಿಸಿಬಿಟ್ಟರು; ನನ್ನ ಭಾವನೆ ಮಾತ್ರ ಹಾಗಲ್ಲ. ಶಾಸ್ತ್ರಿಗಳೆಂದು ಬಹಿಷ್ಕಾರಕ್ಕೆ ಬೆದರಿ ತಲೆ ಬಾಗದೆ, ಪೌರುಷದಿಂದ ಮುನ್ನಡೆದುದರಿಂದಲೇ ಇಂದಿನ ಈ ಪ್ರತಿಷ್ಠೆಯನ್ನು ಸಾಧಿಸಿರುವರು. ಅಂದ ಬಳಿಕ, ಅದರ ಪ್ರಶಸ್ತಿಯು ಹಣೆಬರಹದ ಮೇಲೇಕೆ? ಅವರು, ಆತ್ಮಪೌರುಷದ ಕೈಬೆಳಗಿನ ಬಲದಿಂದಲೇ ತಮ್ಮ ಪ್ರತಿಷ್ಠೆಯ ದಾರಿಯನ್ನು ಕಂಡುಕೊಂಡರೆಂದೇ ಹೇಳಲಾಗದೇಕೆ?



# ದೊಡ್ಡಣ್ಣ

## ೧.



ದೊಡ್ಡಣ್ಣನಾಗಿ ಹುಟ್ಟುವುದಕ್ಕೆ ಸರ್ವಸಾಮಾನ್ಯ ಪುಣ್ಯ ಸಾಲದು. ಅವನೊಂದಿಗೆ ಒಂದಲ್ಲ ಹಲವು ಅಧಿಕಾರಗಳು ಹುಟ್ಟಿಬಂದಿವೆ. ತಮ್ಮಂದಿರು ಇನ್ನೂ ತೊದಲಡಿಯಿಡುತ್ತಾ ಹತ್ತು ಹಜ್ಜೆಗಳಲ್ಲಿ ಇಪ್ಪತ್ತು ಸಲ ಮುಗ್ಗರಿಸಿ ಬೀಳುವಾಗ ಅವರನ್ನು ಕೈಗೊಟ್ಟು ನಡೆಯಿಸುವ ಹೆಗ್ಗಳಿಕೆ ಅವನಲ್ಲಿದೆ. 'ಆಕಾಶದಲ್ಲಿ ಕಾಣುವವನು ಯಾರು, ತಮ್ಮಾ? ಚಂದ ದೇವರಲ್ಲ; ಚಂದ್ರ ದೇವರು" ಎಂದು ನೂರಾರು ಸಲ ಹಟಮಾಡಿ ಹೇಳಿ, ಮಕ್ಕಳ ಅಕ್ಷರಮಾಲೆಗೆ ಹೊರಗಾದ ರೇಫದ ಉಚ್ಚಾರಣೆಯನ್ನು ಕಲಿಸುವ ಸಾಹಸಿಯೆ ಅವನು. ತೆಗೆದು ಮುಂಡಾಡುವ ರಭಸದ ಸಡಗರದಲ್ಲಿ ಕೈಜಾರಿ ನೆಲದಲ್ಲಿ ಬಿದ್ದ ಮಕ್ಕಳ ಚೀತ್ಕಾರವನ್ನು ಕೇಳಿ, ತಾಯಿ ಬಂದು ಗದರಿಸುವಾಗ, ಅವಳ ಬಿರುನೋಟವನ್ನು ಎದುರಿಸಿ, ಮಾತುಮಾತಿಗೆ ಉತ್ತರಕೊಟ್ಟು, ಕೊನೆಗೆ ಏಟಿನಲ್ಲಿ ಅವಸಾನಹೊಂದುವ ದಿಟ್ಟತನವನ್ನು ಅನೇಕ ವೇಳೆ ತೋರಿಸುವ ಸಂದರ್ಭವೂ ದೊಡ್ಡಣ್ಣನಿಗುಂಟು. ತಮ್ಮನು ಕೂತಲ್ಲಿ ಕೂತು, ನಿಂತಲ್ಲಿ ನಿಂತು, ಅವನಿಗೆ ಹಸಿವೆಯಾದರೆ ಮಾತ್ರ ತನಗೂ ಹಸಿವೆಯಾಯಿತೆನ್ನುವ ಎದೆಯು ಎರಕಕ್ಕೂ ದೊಡ್ಡಣ್ಣನೊಬ್ಬನೆ ಪಾತ್ರನು. ಒಟ್ಟಾರೆ, ಇಂತಹ ಹಕ್ಕುಗಳನ್ನೆಲ್ಲಾ ಮೊತ್ತಮಾಡುವಾಗ, ದೊಡ್ಡಣ್ಣನಾಗುವುದು ಯಾವ ಮಕ್ಕಳಿಗೂ ಬೇಡವಾಗಿ ಕಾಣುವುದಿಲ್ಲ. ಅದರಲ್ಲಿಯೂ, ತಾವಿನ್ನೂ, 'ಅಲ್ಲಿ ಗುಮ್ಮ! ಇಲ್ಲಿ ಗುಮ್ಮ!' ಎಂಬ ಬೆದರಿಕೆಯ ಮಾತಿನಿಂದ ಬೆಚ್ಚಿಬೀಳುತ್ತಿರುವಾಗ, ದೊಡ್ಡಣ್ಣನೊಬ್ಬನೆ ಪೇಟೆಗೆ ಹೋಗುತ್ತಾನೆ; ಬರುತ್ತಾನೆ; ದೊಡ್ಡವರೊಂದಿಗೆ ಆಡುತ್ತಾನೆ;

ನೋಡುತ್ತಾನೆ; ಮಾತಿಗೆ ಮಾತು ಬೆರಸುತ್ತಾನೆ; ತನ್ನ ಅಭಿಪ್ರಾಯವನ್ನು ಕೊಡುತ್ತಾನೆ; ಎಂಬ ಎಲ್ಲಾ ವಿಷಯಗಳನ್ನು ನೋಡಿ ಮಕ್ಕಳು ತಾವೂ ಅವ ನಂತೆ ದೊಡ್ಡವರಾಗಿಯೆ ಹುಟ್ಟಬೇಕಿತ್ತೆಂದು ಬಗೆದರೆ ಅದು ಅನ್ಯಾಯವಲ್ಲ.

ಮನೋಹರನಿಗೆ ತನ್ನ 'ದೊಡ್ಡಣ್ಣ'ನ ಹೆಸರನ್ನು ಕೇಳುವಾಗ ತಾನು ಅಣ್ಣನಾಗಲಿಲ್ಲವಲ್ಲಾ! ಎಂಬ ಅಸೂಯೆಯಿಲ್ಲ; ಪ್ರೀತಿ. ಪ್ರಾಯ, ಎಂದು ಹೇಳುವಷ್ಟು ಮನೋಹರನಿಗೆ ವಯಸ್ಸಾಗದಿದ್ದರೂ, ಕೆಲವೊಂದು ಅಧಿಕಾರ ವನ್ನು ತಂದೆಯಿಂದ ಪಡೆವಲ್ಲಿ ತನ್ನೊಡನೆ ಅಣ್ಣನ ಹೆಸರನ್ನೂ ಸೇರಿಸುವನು. ತಂದೆಗೆ ಮೀಸೆಯುಂಟು! ತನಗೂ ತನ್ನ ದೊಡ್ಡಣ್ಣನಿಗೂ ಏಕೆ ಮೀಸೆಯಿಲ್ಲ? ಎಂದು ಅವನ ಪ್ರಶ್ನೆ. ತಾಯಿಯು ತನ್ನನ್ನು ಕರೆವಂತೆ ದೊಡ್ಡಣ್ಣನನ್ನೂ 'ಮಗ' ಎಂದೇಕೆ ಸಂಬೋಧಿಸುವುದಿಲ್ಲ? ಎಂಬುದು ಇನ್ನೊಂದು ಪ್ರಶ್ನೆ. ತನ್ನ ತಂದೆಗೆ ಅವನು 'ಮಗ'ನಾದರೆ ತಾಯಿಗೂ ಮಗನಲ್ಲವೇ? ಎಂದು ಮತ್ತೊಂದು ಪ್ರಶ್ನೆ. ಈ ರೀತಿಯಲ್ಲಿ ತಾಯೊಡನೆ ಕೇಳುತಿದ್ದ ಮನೋ ಹರನಿಗೆ ಹೆಚ್ಚುಸಲ ದೊರೆತ ಉತ್ತರಗಳೆಂದರೆ ಬಲವಾದ ಪೆಟ್ಟುಗಳು ಮಾತ್ರ. ದೊಡ್ಡಣ್ಣನಲ್ಲಿ ಕೇಳಿದಾಗ ಅವನು ಒಂದನ್ನೂ ಬಿಡದೆ ಸರಿಯಾಗಿ ಉತ್ತರಕೊಡುತಿದ್ದನು. ಆದುದರಿಂದ ಅವನಿಗೆ ದೊಡ್ಡಣ್ಣನಲ್ಲಿ ತನ್ನ ಜೀವ ವನ್ನು ಅವನ ಜೀವದಲ್ಲಿ ಎರಕ ಹೊಯ್ದಷ್ಟು ಪ್ರೇಮ!

ಆದರೂ 'ದೊಡ್ಡಣ್ಣ'ನನ್ನು ತಾಯಿಯು ಮಗನೆಂದು ಕರೆಯದಿರುವು ದಕ್ಕೆ ಸರಿಯಾದ ಕಾರಣವು ಅವನಿಗೆ ಇದುವರೆಗೂ ದೊರೆತಿರಲಿಲ್ಲ. ಆದುದ ರಿಂದ, ತಾಯಿಯ ಪೆಟ್ಟಿಗೆ ಮೆಯ್ಯೊಡ್ಡುವುದಕ್ಕೆ ಹೆದರಿ, ದೊಡ್ಡಣ್ಣನನ್ನೆ ಮತ್ತೂ ಮತ್ತೂ ಕೇಳಿದನು. ಅವನೇನೂ ಉತ್ತರ ಕೊಡಲಿಲ್ಲ. ಏನೇನೋ ಹೇಳಿದನು; ಮಾತಾಡುವಾಗ ಧ್ವನಿ ಗದ್ಗದವಾಯಿತು, ತುಟಿ ನಡುಗಿತು, ಮುಖ ಕೆಂಪಿತು, ಒಂದೆರಡು ಬಿಸಿಬಿಸಿಯಾದ ಕಣ್ಣೀರ ಹನಿಗಳು ಮನೋ ಹರನ ಕೈಗಳ ಮೇಲೂ ಬಿದ್ದುವು. ಆಗ ಅವನು, 'ಅಳುವುದು ಯಾಕಣ್ಣಾ? ನಾನು ಈ ದಿನ ತಾಯ ಹತ್ತಿರ ಖಂಡಿತವಾದ ಮಾತನ್ನು ಹೇಳುತ್ತೇನೆ. ನನ್ನನ್ನು ಮಗನೆಂದು ಕರೆವಂತೆ, ನಿನ್ನನ್ನೂ ಇಂದಿನಿಂದ ಕರೆಯದಿದ್ದರೆ ನಾನು ನಿಶ್ಚಯ ವಾಗಿಯೂ ಊಟಮಾಡುವುದಿಲ್ಲ; ಎಂದು ಚಂಡಿಹಿಡಿದು ಕೂತುಕೊಳ್ಳು ತ್ತೇನೆ; ಏನು ಮಾಡುತ್ತಾಳೆ ನೋಡುವ,' ಎಂದು ಸಂತೈಸಿದನು. ಮನೋ

ಹರನೇನೋ ಅಣ್ಣನನ್ನು ಸಂತಯಿಸಬೇಕೆಂದೇ ಹೀಗೆ ಆಡಿದುದು. ಆದರೆ ಅದರ ಫಲವು ವಿಪರೀತವಾಯಿತು. ಮನೋಹರನ ಮಾತನ್ನು ಕೇಳಿ ಅರಳ ಬೇಕಾಗಿದ್ದ ಕಣ್ಣುಗಳಿಂದ ಕಣ್ಣೀರು ಕೋಡಿ ಹರಿಯಿತು. ಮುಂದೆ ಮಾಡುವುದು ಏನೆಂದು ಮನೋಹರನಿಗೆ ಗೊತ್ತಾಗಲಿಲ್ಲ. 'ಹೋಗಲಿ! ನಿನಗಿಷ್ಟು ದುಃಖವಾಗುವುದಿದ್ದರೆ ಈ ಪ್ರಶ್ನೆಯನ್ನು ಇನ್ನೆಂದೂ ಕೇಳುವು ದಿಲ್ಲ. ಒಮ್ಮೆ ಅಳುವುದನ್ನು ನಿಲ್ಲಿಸು, ಅಣ್ಣ!' ಎಂದು ಅವನ ಬಾಯಿಗೆ ಕೈಯಿಟ್ಟನು. ದೊಡ್ಡಣ್ಣನು ಮನೋಹರನನ್ನು ಬಿಗಿಯಾಗಿ ಅಪ್ಪಿ, 'ಇಲ್ಲ, ಮನು! ಅಳುವುದಿಲ್ಲ' ಎಂದು ಹೇಳಿದ ಮೇಲೆ ಅವನ ಮನಸ್ಸು ಸ್ವಲ್ಪ ಹಗುರವಾಯಿತು.

ದಿನಗಳು ಕಳೆದುವು. ಯಾಕೆಂದು ಗೊತ್ತಿಲ್ಲ; ಬರಬರುತ್ತಾ ತನ್ನ ದೊಡ್ಡಣ್ಣನು ಎಂದಿನಂತಿರದೆ ಮನಸ್ಸಿನೊಳಗೆ ಕೊರಗುತ್ತಾ ಸೊರಗುತ್ತಾ ಇರುವಂತೆ ಮನೋಹರನಿಗೆ ತಿಳಿದುಬಂತು. ಒಮ್ಮೊಮ್ಮೆ ತನ್ನ ತಾಯಿಯು ಉರಿಮೋರೆಯಿಂದ ದೊಡ್ಡಣ್ಣನೊಡನೆ, 'ನೀನು ಮನೆಗೆ ಮಾರಿ! ಅವರು ತಂದುದೆಲ್ಲಾ ನಿನ್ನ ಹೊಟ್ಟೆತುಂಬಿಸುವುದಕ್ಕಾಯಿತು!' ಎಂದು ಮೊನೆಮಾತು ಗಳನ್ನು ಆಡುತಿದ್ದಳು. 'ನನ್ನ ಮಕ್ಕಳ ಆರೈಕೆಯೆ ನನಗೆ ಸಾಕಾಗಿದೆ. ಭೂಮಿಗೆ ಭಾರ, ಅನ್ನಕ್ಕೆ ಸಂಚಕಾರ; ನಿನ್ನ ಚಾಕರಿ ಮಾಡುವವರು ಯಾರು? ಎಲ್ಲಾದರೂ ಹೋಗು, ಬಿಕ್ಕೆಬೇಡು, ಹೊಟ್ಟೆಗೆ ಬೇಕಾದ ಕೂಳು ಸಿಕ್ಕುವುದು; ಇಲ್ಲಿ ನಿನಗೆ ಎಡೆಯಿಲ್ಲ'ವೆಂದು, ಇಡೀ ಮನೆಗೆ ತಾನೆ ಅಧಿ ಕಾರಿಣಿಯೆಂಬಂತೆಯೂ ತನ್ನ ಮಕ್ಕಳಲ್ಲದೆ ಇತರರಿಗೆ ಲೋಕದಲ್ಲಿ ಸ್ಥಳ ವಿಲ್ಲವೆಂಬಂತೆಯೂ ಕೆಡುಮೋರೆಯಿಂದ ಆಡುತಿದ್ದ ತಾಯ ಮಾತುಗಳನ್ನ ವನು ಕೇಳುತಿದ್ದನು. 'ಏನು ತಾಯೆ, ಇದು? ನನ್ನ ದೊಡ್ಡಣ್ಣನನ್ನು ಹೀಗೆ ಬೇಸರಿಸಬಾರದು,' ಎಂದು ದೈನ್ಯದಿಂದವನು ಬೇಡಿಕೊಂಡನು. ಆಗ ಹೆಬ್ಬುಲಿಯಂತೆ ಬುಸುಗುಟ್ಟುತ್ತಾ ತಾಯಿಯು, 'ಇನ್ನು ಮುಂದೆ ಆ ಪರ ದೇಶಿಯನ್ನು ದೊಡ್ಡಣ್ಣನೆಂದರೆ ನಾಲಗೆಯನ್ನು ಕೊಯ್ಯುತ್ತೇನೆ!' ಎಂದು ಗರ್ಜಿಸಿದಳು. ಆ ಮೇಲೆ ತಾಯ ಮುಂದೆ ದೊಡ್ಡಣ್ಣನನ್ನು ಹೆಸರುಹಿಡಿದು ಕರೆವ ಸಂತುಷ್ಟಿಯೂ ಮನೋಹರನಿಗೆ ಇಲ್ಲದಂತಾಯಿತು.

ಒಂದು ದಿನ ಮನೋಹರನ ತಂದೆ (ಭೀಮರಾಯನು) ಯಾವುದೋ ಒಂದು ಯೋಚನೆಯಲ್ಲಿ ಮಗ್ನನಾಗಿ ಚಾವಡಿಯ ಬದಿಯಲ್ಲಿ ಕುಳಿತಿದ್ದನು. 'ದೊಡ್ಡಣ್ಣ'ನು ಶಾಲೆಗೆ ಹೋಗಿದ್ದನು. ತಾಯಿಯು ಮನೆಗೆಲಸವನ್ನು ಮಾಡುತಿದ್ದಳು. ಮನೋಹರನು ಅಣ್ಣನಿರದ ಬೇಸರದಿಂದ ಒಳಮನೆಯನ್ನು ಸೇರಿ, ಆ ಮಾತು ಈ ಮಾತುಗಳನ್ನಾಡಿ, ತಾಯನ್ನು ಕೆಣಕಿದುದರ ಪರಿಣಾಮವಾಗಿ ಎಂದಿಗಿಂತಲೂ ಹೆಚ್ಚು ಕಾರವುಳ್ಳ ಪೆಟ್ಟಿನ ರುಚಿಯನ್ನು ನೋಡಿ, ತಂದೆಯ ಬಳಿಗೆ ಬಂದನು. ಬಂದವನೆ, 'ನಿನ್ನ ಕೈಯನ್ನು ಸ್ವಲ್ಪ ಆಚೆಗೆ ಸರಿಸಪ್ಪಾ! ನಾನು ಕುಳಿತುಕೊಳ್ಳುತ್ತೇನೆ,' ಎಂದು ತನ್ನೊಬ್ಬನ ಅಧಿಕಾರಕ್ಕೆ ಒಳಪಟ್ಟ ತಂದೆಯ ತೊಡೆಯನ್ನೇರಿ, ಕೈಬೆರಳುಗಳನ್ನು ಲೆಕ್ಕಿಸುತ್ತಾ, ಪೆಟ್ಟುಗಳ ನೋವನ್ನು ಮರೆತುಬಿಟ್ಟನು. ಅಷ್ಟರಲ್ಲಿ ದೊಡ್ಡಣ್ಣನ ನೆನಪು, ಹಾರಿಬಂದ ಹಕ್ಕಿಯಂತೆ, ಅವನ ಮನಸ್ಸನ್ನು ಹೊಕ್ಕು, ಅಲ್ಲೆ ಕುಳಿತಿತು. ಮನೋಹರನು ಕೂಡಲೆ ತಂದೆಯೊಡನೆ, 'ಅಪ್ಪಾ! ನಾನೊಂದು ಕೇಳುತ್ತೇನೆ. ಉತ್ತರಕೊಡುವೆಯೊ?' ಎಂದು ಕೇಳಿದನು. ಅದಕ್ಕೆ ಭೀಮರಾಯನು, 'ನೀನು ಕೇಳುವುದೇನು, ಮನು?' ಎಂದು ಪ್ರಶ್ನೆಮಾಡಿದನು.

'ಪೆಟ್ಟು ಕೊಡದಿದ್ದರೆ ಹೇಳುತ್ತೇನೆ.'

'ಇಲ್ಲ, ಮಗು! ನಿನಗೆ ನಾನು ಎಂದಾದರೂ ಹೊಡೆದದ್ದುಂಟೇ?'

'ನನಗೆ ಹೊಡೆದದ್ದಿಲ್ಲ; ಆದರೆ ದೊಡ್ಡಣ್ಣನನ್ನು ಒಮ್ಮೊಮ್ಮೆ ಹೊಡೆಯುತ್ತೀ. ಮೊನ್ನೆ ಶಾಯಿಕುಪ್ಪಿಯನ್ನು ಒಡೆದದ್ದು ನಾನು. ತಾಯಿಯು ಗದರಿಸಿದಳೆಂದು ನೀನೂ ಅಣ್ಣನನ್ನು ಗದರಿಸಿದೆ. ಹೊಡೆಯುವುದಕ್ಕೆ ಕೈಯೆತ್ತಿದೆ. ನಾನು ಆ ಸಮಯಕ್ಕೆ ಬಾರದಿದ್ದರೆ, ಪಾಪ! ದೊಡ್ಡಣ್ಣನ ಗತಿಯೇನಾಗುತಿತ್ತೊ!'

'ಹೌದು, ಮನು! ಸ್ವಲ್ಪ ಅಜಾಗ್ರತೆಯಾಯಿತು.'

'ಇನ್ನು ಮುಂದೆ ದೊಡ್ಡಣ್ಣನನ್ನು ಹೊಡೆಯಬಾರದು; ಬಯ್ಯಲೂ ಬಾರದು.'

'ಹುಂ.'

'ಅಪ್ಪಾ! ನನಗೆ ದೊಡ್ಡಣ್ಣನನ್ನು ಕಂಡರೆ ತಾಯನ್ನು ಕಂಡದ್ದಕ್ಕಿಂತಲೂ ಹೆಚ್ಚು ಸಂತೋಷ ಆಗುತ್ತದೆ. ನಿನಗೇಕೆ ಆಗುವುದಿಲ್ಲ?'

'ಆಗುತ್ತದೆ, ಮನೂ!'

'ಇಲ್ಲಪ್ಪಾ! ನೀನೂ ಅವನನ್ನು ಕಂಡರೆ ಒಮ್ಮೊಮ್ಮೆ ಉರಿಮೋರೆಯನ್ನು ತೋರಿಸುತ್ತೀ.'

'ಇಲ್ಲ, ಮಗೂ!'

'ನಾನು ಖಂಡಿತವಾಗಿಯೂ ಹೇಳುತ್ತೇನೆ. ನೀನು ತಾಯಿಯ ಮಾತನ್ನು ನಂಬಬಾರದು.'

'ಯಾಕೆ?'

'ಅವಳು ಸುಳ್ಳು ಹೇಳುತ್ತಾಳೆ.'

'ಹುಂ.'

'ಯಾಕೆ 'ಹುಂ' ಎಂದು ಉತ್ತರ ಕೊಡುವುದು? ತಾಯಿಯನ್ನು ಹೀಗೆ ನಾನು ಹೇಳುವುದು ನಿನ್ನ ಮನಸ್ಸಿಗೆ ಆಗುವುದಿಲ್ಲ; ಅಲ್ಲವೇ?'

'ಹಿರಿಯರನ್ನು ಬಯ್ಯಬಾರದು, ಮನು!'

'ನಾನು ದೊಡ್ಡಣ್ಣನನ್ನು ಬಯ್ಯುವುದಿಲ್ಲ. ನಿನ್ನನ್ನು ಬಯ್ಯುವುದಲ್ಲ. ಆದರೆ, ತಾಯಿಯನ್ನು ಮಾತ್ರ—'

'ತಾಯಿಯಿಂದ ಹೆಚ್ಚಿನವರು ನಿನಗೆ ಯಾರೂ ಇಲ್ಲ.'

'ಇದ್ದಾರೆ! ನಮ್ಮ ದೊಡ್ಡಣ್ಣನಿದ್ದಾನೆ.'

'ಆಯಿತು. ನೀನು ಯಾವುದನ್ನು ಕೇಳುತ್ತೇನೆ ಎಂದು ಹೇಳಿದ್ದು?'

'ತಾಯಿಯು ನನ್ನನ್ನು 'ಮಗ' ಎಂದು ಕರೆಯುತ್ತಾಳೆ; ದೊಡ್ಡಣ್ಣನನ್ನು ಏಕೆ ಕರೆಯುವುದಿಲ್ಲ?'

'ಅವಳಿಗೆ ಅವನು ಮಗನಲ್ಲ.'

'ನಾನು?'

'ಹೌದು! ನೀನು ಅವಳ ಮಗ.'

'ಹಾಗಾದರೆ ನನಗೂ ತಂದೆ ನೀನು; ದೊಡ್ಡಣ್ಣನಿಗೂ ತಂದೆ ನೀನು; ಇದು ಹೇಗೆ?'

'ನಿನ್ನ ದೊಡ್ಡಣ್ಣನ ತಾಯಿ ತೀರಿ ಹೋಗಿದ್ದಾಳೆ.'

'ಹಾಗಾದರೆ ಅವನಿಗೆ ತಾಯಿ ಇಲ್ಲ!'

'ಇಲ್ಲ, ಮನು.'

'ನನಗೆ ಕಣ್ಣೀರು ಬರುತ್ತದೆ. ನಮ್ಮ ದೊಡ್ಡಣ್ಣನಿಗೆ ತಾಯಿಲ್ಲ. ನನ್ನ ತಾಯಿ ಅವನನ್ನು ಬೈಯುತ್ತಾಳೆ, ಬೆದರಿಸುತ್ತಾಳೆ, ಹೊಡೆಯುತ್ತಾಳೆ.'

'ಹೀಗೆ ತಾಯಿಯನ್ನು ದೂರಬಾರದಪ್ಪಯ್ಯಾ.'

'ಹಾಗಾದರೆ ನೀನು ಅಳದಿರಬಾರದು. ದೊಡ್ಡಣ್ಣನಿಗೆ ತಾಯಿಲ್ಲವೆಂದು ಕೇಳಿ ನನಗೆ ದುಃಖಬರುತ್ತದೆ; ನಿನಗೆ ಬರುವುದಿಲ್ಲ.'

ಮಗನ ಈ ಮಾತನ್ನು ಕೇಳಿದ ಕೂಡಲೆ ಕಣ್ಣೀರ ಪರಿಚಯಕ್ಕೆ ಹಿಂಜರಿಯುತಿದ್ದ ಭೀಮರಾಯನ ಕಣ್ಣುಗಳಲ್ಲಿ ಸರಸರನೆ ಅಶ್ರುಪ್ರವಾಹವು ಉಕ್ಕೇರಿತು. ಇದನ್ನು ನೋಡಿ ಮನೋಹರನು, 'ಅಪ್ಪ! ನೀನು ಒಳ್ಳೆಯವನು! ದೊಡ್ಡಣ್ಣನಿಗೆ ತಾಯಿಲ್ಲವೆಂದು ನೀನು ಕಣ್ಣೀರನ್ನು ಸುರಿಸುತ್ತಿರುವೆ,' ಎಂದು ತಂದೆಯ ಮೃದುಮನಸ್ಸಿಗೆ ಒಂದು ಪ್ರಮಾಣಪತ್ರವನ್ನು ಕೊಟ್ಟನು. ಮಗನು ಪ್ರಶ್ನೆಗಳಿಂದ ತನ್ನ ಪ್ರಜ್ಞೆಗೆ ದಾಳಿಯಿಡುತಿದ್ದಾಗ, ಸೋಲವನ್ನು ತಪ್ಪಿಸುವ ಮಾರ್ಗವೇನೆಂದು ಭೀಮರಾಯನಿಗೆ ತೋರದಾಯಿತು. ಅಷ್ಟರಲ್ಲಿ ಶಾಲೆಬಿಟ್ಟು ಬಂದ ಶ್ಯಾಮನು ಅಂಗಳದಿಂದ ಜಗಲಿಗೆ ಕಾಲಿಟ್ಟನು. ಭೀಮರಾಯನು, 'ನೋಡು, ಮನು! ನಿನ್ನ ದೊಡ್ಡಣ್ಣ ಬಂದ,' ಎಂದು ಹೇಳಿದುದೆ ತಡ; ಸರಕ್ಕನೆ ಅಲ್ಲಿಂದ ಎದ್ದು ಮನೋಹರನು, 'ದೊಡ್ಡಣ್ಣಾ! ದೊಡ್ಡಣ್ಣಾ! ಇಂದು ತಂದೆಯ ಹತ್ತಿರ ತಾಯಿಯ ದೂರು ಹೇಳಿದ್ದೇನೆ. ಇನ್ನು ಮುಂದೆ ಮೂಲೆಯಲ್ಲಿ ಕುಳಿತು ಮುಖವನ್ನು ಕಂದಿಸಬಾರದು; ತಿಳಿಯಿತೊ?' ಎಂದು ಹೇಳುತ್ತಾ ಶ್ಯಾಮನ ಪುಸ್ತಕಗಳ ಚೀಲಕ್ಕೆ ಕೈಹಾಕಿ ತನ್ನ ಪ್ರೀತಿಯ ಸಚಿತ್ರ ಪುಸ್ತಕವೊಂದನ್ನು ತೆಗೆದು, ಹುಡುಗರಿಬ್ಬರ ಚಿತ್ರಗಳ ಮೇಲೆ ಬೆರಳಿಟ್ಟು, 'ಇದು ದೊಡ್ಡಣ್ಣ! ಇದು ನಾನು,' ಎಂದು ಜಗಲಿಯ ಉದ್ದಕ್ಕೂ ಓಡಾಡಿದನು.

---

೨.

ಭೀಮರಾಯನಿಗೆ ತನ್ನವರೆಂದು ಹೇಳುವುದಕ್ಕೆ ಹೆಚ್ಚು ಮಂದಿ ಬಂಧುಗಳಿಲ್ಲ. ಸಂಸಾರವಾದರೂ ಚಿಕ್ಕದು. ಗಂಡ; ಹೆಂಡತಿ; ನಾಲ್ಕೈದು ವರ್ಷದ ಮನೋಹರನೆಂಬ ಎರಡನೆ ಹೆಂಡತಿಯ ಮಗ; ಇನ್ನೊಂದು ಕೈಗೂಸು; ಹನ್ನೆರಡು ವರ್ಷ ಪ್ರಾಯದ ಮಗ, ಎಂದರೆ ಶ್ಯಾಮ; ಮನೋಹರನ ಹೆಸರಿನಿಂದ ಕರೆಯುವುದಿದ್ದರೆ 'ದೊಡ್ಡಣ್ಣ.' ಇಷ್ಟೆ ಜನರಲ್ಲದೆ ಈ ಚಿಕ್ಕ ಕುಟುಂಬದಲ್ಲಿ ಮತ್ತಾರೂ ಇಲ್ಲ. ದಿನಂಪ್ರತಿ ಕಚೇರಿಗೆ ಹೋಗಿ ಬಂದರೆ ಸರಿ; ವೆಚ್ಚಕ್ಕೆ ಬೇಕಾದ ಸಂಬಳ ಸಿಕ್ಕುತಿತ್ತು. ಸಾಲದುದಕ್ಕೆ 'ಕಲೆಕ್ಟರ್' ದೊರೆಗಳ ಸನ್ನಿಧಾನಕ್ಕೆ ಪ್ರವೇಶದ್ವಾರದಂತಿದ್ದ ಇವರ ದರ್ಶನಕ್ಕೆ ಬರುತಿದ್ದ ನಾಡುಗರಿಂದ ಎಲ್ಲರಿಗೂ ಕಾಣುವಂತೆ ತೆಗೆದುಕೊಳ್ಳಬಹುದಾದ ಕೈಕಾಣಿಕೆ. ಅದರ ಮೇಲೆ, ಗೋಪ್ಯವಾಗಿ ಬರುವ ಹವಿರ್ಭಾಗಗಳು. ಈ ರೀತಿಯ ಎಲ್ಲಾ ಆದಾಯಗಳನ್ನು ಲೆಕ್ಕ ಹಾಕಿ ನೋಡಿದರೆ, ನಿತ್ಯದ ವೆಚ್ಚ ಹೋಗಿ ತಿಂಗಳೊಂದಕ್ಕೆ ಸ್ವಲ್ಪವಾದರೂ ಉಳಿತವಾದೀತೆಂದು ಜನರು ಆಡುತಿದ್ದರು. ತೋರಿಕೆಯ ಮಟ್ಟಿಗೆ, ಭೀಮರಾಯನ ಅಚ್ಚುಕಟ್ಟಿನ ಸಣ್ಣ ಆಡಳಿತೆಯಲ್ಲಿ ಸುಖಕ್ಕಲ್ಲದೆ ದುಃಖಕ್ಕೆ ಎಡೆಯೆ ಇರಲಿಲ್ಲ. ಆದರೆ ಇತ್ತಿತ್ತಲಾಗಿ ಅವನ ಮನಸ್ಸನ್ನು ದುಃಖದ ಕೀಟವು ಕೊರೆಯುತಿತ್ತೆಂದು ವದಂತಿ.

ಇದಕ್ಕೆ ಕಾರಣವೇನೆಂದು ಬಹುದೂರ ಹುಡುಕಿ ಹೋಗಬೇಕಾಗಿಲ್ಲ. ಎಲ್ಲಾ ಕೆಲಸಗಳನ್ನು ಮಾಡುವಾಗಲೂ ಬಿಡುಗಣ್ಣನಾಗಿಯೆ ಇದ್ದ ಭೀಮರಾಯನು ಪ್ರಾಯದ ಹೋಕಿನಲ್ಲಿ ಒಂದು ಸಣ್ಣ ತಪ್ಪನ್ನು ಮಾಡಿದನು. ಅದರಿಂದಾದ ಪರಿಣಾಮವು ಬಲು ದೊಡ್ಡದಾಯಿತು. ಅವನ ಆಯುಸ್ಸಿನ ದಿವಸದಲ್ಲಿ ಹನ್ನೆರಡರ ಮೇಲೆ ನಾಲ್ಕು ಗಂಟೆ ಕಳೆದಿತ್ತು. ಆಗ ಅವನ ಪ್ರಥಮ ಪತ್ನಿ ತೀರಿಹೋದಳು; ಎಂದಮೇಲೆ ಭೀಮರಾಯನು ವಿಧುರನಾದನೆಂಬ ಮಾತು ಪುನರುಕ್ತ. ಪಾರಲೌಕಿಕಸದ್ಗತಿಯನ್ನೆ ದೃಷ್ಟಿಯಲ್ಲಿಟ್ಟು ವಾದಮಾಡಿದರೂ ಭೀಮರಾಯನು ಪುನರ್ವಿವಾಹಮಾಡುವುದಕ್ಕೆ ಸಾಕಷ್ಟು ಕಾರಣಗಳಿರಲಿಲ್ಲ. ಏಕೆಂದರೆ, ಅವನ ದಿವಂಗತ ಪತ್ನಿಯ ಸದ್ಗುಣಕ್ಕೆ ಸಾಕ್ಷಾತ್ ದೃಷ್ಟಾಂತವಾಗಿ ಅವಳ ಮಗ ಶ್ಯಾಮನಿದ್ದನು.

ಆದರೂ ಮನೆಯಲ್ಲಿ ಅಡಿಗೆಗೆ ಯಾರೂ ಇಲ್ಲವೆಂದು—ಅಡಿಗೆ ಕೆಲಸಕ್ಕೆ ಬೇಕಾದಷ್ಟು ಉಮೇದ್ವಾರರು ಸಿಕ್ಕುವ ಊರಲ್ಲಿದ್ದರೂ—ಅವನು ಮದುವೆ ಯಾದನು. ಮದುವೆಯಾದ ಮೇಲಲ್ಲವೇ? ಹೆಂಡತಿ ಅಡಿಗೆ ಮಾಡುವು ದಷ್ಟೆ ತನ್ನ ಕೆಲಸವೆಂದು ಸುಮ್ಮನಿರುತ್ತಾಳೆಯೆ? ಎಂದೂ ಇಲ್ಲ. ಮನೋ ರಮೆಯು ಕೆಲವೊಂದು ಅಧಿಕಾರಿಗಳನ್ನು ಸ್ವಾಯತ್ತಮಾಡಿಕೊಂಡಳು.

ಭೀಮರಾಯನಿಗೆ ತನ್ನ ತಪ್ಪು ತಿಳಿಯಿತು. ಮುಂದಾದರೂ ತಪ್ಪು ಮಾಡುವುದಿಲ್ಲವೆಂದು ಮನಸ್ಸಿಗೆ ಕಡಿವಾಣ ಹಾಕಿದನು. ಎರಡನೆ ಮದುವೆ ಯಾದುದೇ ತಪ್ಪು. ಆ ತಪ್ಪಿನೊಂದಿಗೆ, ಮದುವೆಯಾದ ಹರೆಯದ ಹೆಂಡತಿ ಸ್ವಾಧಿಕಾರವನ್ನು ಮೆರೆಯಿಸುವಾಗ; ಅದಕ್ಕೆ, ಮುದುಕನೆಂದು ಹೇಳಿಸಿ ಕೊಳ್ಳಲು ಮನಸ್ಸಿಲ್ಲದಿದ್ದರೂ ತಲೆಗೂದಲು ನರೆತಿದ್ದ ತಾನು ಅಡ್ಡಬಂದರೆ ಇನ್ನೊಂದು ತಪ್ಪಾದೀತೆಂದು ಮನಸ್ಸಿನಲ್ಲೆ ಭಾವಿಸಿಕೊಂಡನು. ಹೊತ್ತಿಗೆ ಸರಿಯಾಗಿ ಮೀಹ, ಊಟ, ಫಲಾಹಾರ; ದೊರೆತರೆ ಮತ್ತೆ ಎಷ್ಟು ತತ್ವ ಗಳನ್ನೂ ಆಡಬಲ್ಲ ಭೀಮರಾಯನಿಗೆ, ಕ್ರಮೇಣ ಹೆಂಡತಿಯ ಅಂಕೆಯನ್ನು ಮೀರುವುದು ಕಷ್ಟವಾದುದರಲ್ಲಿ ಯಾರೂ ದೋಷ ಹುಡುಕಬಾರದು. ಇದರಿಂದಾಗಿ ಅವನ ಬಣ್ಣವು ಸಂಪೂರ್ಣ ಬದಲಾಯಿತು. ಮನೋ ರಮೆಯ ಅಪ್ರೀತಿಗೆ ಪಾತ್ರನಾಗಿದ್ದ ಶ್ಯಾಮನಲ್ಲಿ ಭೀಮರಾಯನಿಗೆ ಇದು ವರೆಗಿದ್ದ ಪ್ರೇಮವು, ಪ್ರಾಯ ಹೆಚ್ಚಿದಂತೆ ಕಡಿಮೆಯಾಗುತ್ತಾ ಬಂತು. ಒಂದನೆ ಹೆಂಡತಿ ಸತ್ತು ಎಷ್ಟೋ ವರ್ಷವಾಯಿತು. ಅವಳೊಡನೆ ದಾಂಪತ್ಯ ಸುಖವನ್ನನುಭವಿಸಿದ ಅಂದಿನ ದಿನಕ್ಕೂ ಇಂದಿಗೂ ಎಷ್ಟೋ ವರ್ಷಗಳ ಅಂತರ! ಇಂದು ಅವಳಾರು? ತಾನಾರು? ಅವಳ ಮಗನು ತನಗೇನಾಗ ಬೇಕು? ಮನೋರಮೆ ಯೋಗ್ಯತೆಯಲ್ಲಿ ಮೊದಲಿನವಳಿಗಿಂತ ಕಡಿಮೆಯೇ? ಎಂದೆಲ್ಲಾ ತರ್ಕವಿತರ್ಕಗಳನ್ನು ಮನಸ್ಸಿನಲ್ಲೆ ಮಾಡಿದಾಗ, ಎರಡನೆಯ ಮದುವೆಯೆ ಲಾಭಕರವೆಂದು ಅವನಿಗೆ ಕಂಡು ಬಂತು. ಆದರೂ ಶ್ಯಾಮನ ನಿಮಿತ್ತವಾಗಿ ಆಗಾಗ ಮನೆಯೊಳಗೆ ನಡೆಯುತಿದ್ದ ಜಗಳಗಳು ತನ್ನ ನಿತ್ಯದ ತ್ರಿಕರ್ಮಗಳಿಗೆ (ಮೀಹ, ಊಟ, ಫಲಾಹಾರಗಳಿಗೆ) ಕೆಲವೊಮ್ಮೆ ವಿಘ್ನ ತರುತಿದ್ದುವು. ಇದೊಂದು ಬೇಸರವು ಭೀಮರಾಯನ ಎಲ್ಲಾ ಉತ್ಸಾಹಗಳನ್ನೂ ಉರುಳಿಸಿಬಿಡುತಿತ್ತು.

ಒಂದು ದಿನ ಭೀಮರಾಯನಿಗೆ, ಕಲೆಕ್ಟರರ ಸಂಗಡ ಜಿಲ್ಲೆಯ ಕೆಲವು ಭಾಗಗಳಲ್ಲಿ ಸಂಚಾರಮಾಡುವ ಸಂದರ್ಭ ಬಂತು. ಮನೆಯನ್ನು ಬಿಡದೆ ನಿರ್ವಾಹವಿಲ್ಲ. ಬಿಡುವುದಕ್ಕೆ ಮನಸ್ಸಿಲ್ಲ. ತಾನು ಮನೆಯಲ್ಲಿಲ್ಲದಿದ್ದರೆ ತಾಯಿಯ ರೋಷದಿಂದ ಮನೋಹರನನ್ನು ಕಾಪಾಡುವರಾರು? ಚಿಕ್ಕ ತಾಯನ್ನು ಪೀಡಿಸಬೇಡವೆಂದು ಶ್ಯಾಮನನ್ನು ನಿರ್ಬಂಧದಲ್ಲಿಡುವವರಾರು? ದಿನಕ್ಕೆ ನಾಲ್ಕಾರು ಸಲ ಮೊಲೆಯುಣ್ಣುವುದಕ್ಕೂ ತತ್ಕಾರವಾದ ಕೈಗೂಸಿನ ಕೂಗನ್ನು ಕೇಳಿ, ಓಡಿಬಂದು ಹಿಡಿದುಕೊಳ್ಳುವವರಾರು? ಒಬ್ಬಳೆ ಮನೆ ಗೆಲಸವನ್ನೆಲ್ಲಾ ಮಾಡುವ ಹೆಂಡತಿಯ ಕಷ್ಟಗಳಲ್ಲಿ ಸಹಭಾಗಿಯಾಗುವ್ರ ದಾರು? ಎಂದು ಮೊದಲಾದ ಯೋಚನೆಗಳು ಹುಟ್ಟಿದುವು. ಆದರೆ ಕಲೆ ಕ್ಟರರ ಆಜ್ಞೆ! ಎಂದ ಮೇಲೆ ಎಂತಹ ಯೋಚನೆಯೂ ಮೂಲೆಪಾಲನ್ನು ಸೇರಲೇಬೇಕು. ಉಪಾಯಾಂತರವಿಲ್ಲದೆ, 'ಮನೋರಮೆ! ನಾನೀಗ ಹೋಗುತ್ತೇನೆ. ಬರುವಾಗ ಕೆಲವು ದಿವಸಗಳಾಗಬಹುದು. ಮನೆಯಲ್ಲಿ ಬಹಳ ಜಾಗ್ರತೆಯಿಂದಿರು,' ಎಂದು ಎಚ್ಚರದ ಮಾತನ್ನು ಹೇಳಿ ಹೊರ ಟನು. ಮನೋರಮೆಯು, 'ನಿಮ್ಮ ಶ್ಯಾಮನಿರುವಾಗ ಯಾವ ಜಾಗ್ರ ತೆಯೂ ಬೇಡ' ಎಂದು ತನ್ನ ವ್ಯಂಗ್ಯಸಾಮರ್ಥ್ಯವನ್ನು ಹೊರಗೆಡವಿ ದಳು. ಭೀಮರಾಯನು ಶ್ಯಾಮನನ್ನು ನೋಡಿ, 'ಜಾಗ್ರತೆ! ಶ್ಯಾಮ, ನಾನಿಲ್ಲದಿರುವಾಗ ಎಲ್ಲಿಯಾದರೂ ತಂಟೆಮಾಡಿದೆಯೆಂದು ನನಗೆ ತಿಳಿದು ಬಂದರೆ, ಪೆಟ್ಟನ್ನು ಸಹಿಸಬೇಕಾದರೆ ಬೆನ್ನಿಗೆ ಹಾಳೆ ಕಟ್ಟಿಕೊಳ್ಳಬೇಕು. ತಿಳಿಯಿತೊ?' ಎಂದು ಎಚ್ಚರಿಕೆಯ ಮಾತನ್ನು ಹೇಳಿ, ಹೊರಟುಹೋದನು.

ತಂದೆಯು ಮನೆಯ ಕಡೆಗೆ ಬೆನ್ನು ತಿರುಗಿಸಿದ್ದೇ ತಡ; ಶ್ಯಾಮ ರಾಯನ ಮೇಲೆ ಇದುವರೆಗೆ ಹಲ್ಲುಮಸೆಯುತಿದ್ದ ಮನೋರಮೆಗೆ, ಹಗೆ ತೀರಿಸುವುದಕ್ಕೆ ಸಂಪೂರ್ಣ ಅವಕಾಶ ಸಿಕ್ಕಿತು. ಮನೋಹರನ 'ದೊಡ್ಡ ಣ್ಣ'ನು ಇಂದು ಬಹು ದೀನನಾಗಿದ್ದಾನೆ. ಸಣ್ಣ ಪ್ರಾಯದ ಮಕ್ಕಳಲ್ಲಿರುವ ಚಟುವಟಿಕೆ ಶ್ಯಾಮನಲ್ಲಿಯೂ ಇತ್ತು. ಈ ಚಟುವಟಿಕೆಯು ಹಲವೊಮ್ಮೆ ಹಾನಿಮಾಡದ ಸಣ್ಣಪುಟ್ಟ ತಂಟೆಯಾಗಿ ಮಾರ್ಪಡುತಿತ್ತು. ಹೊಡೆದರೂ ಮಾತಾಡದೆ ಕಲ್ಲಿನಂತೆ ಕುಳಿತು ಸಜೀವತೆಯ ಲಕ್ಷಣವನ್ನೆ ತೋರಿಸದಿರು ವುದು ಶ್ಯಾಮನ ಸ್ವಭಾವಕ್ಕೆ ವಿರುದ್ಧ. ಹನ್ನೆರಡು ವರ್ಷ ಪ್ರಾಯದ

ಹುಡುಗರಲ್ಲಿರಬೇಕಾದ ; ಎಲ್ಲಾ ಗುಣಗಳೂ ಕೆಲವು ದೋಷಗಳೂ ಅವ ನಲ್ಲಿದ್ದುವು. ಮನೋರಮೆಗೆ ಸಹನೆಯಾಗಲಿಲ್ಲ. ಪ್ರಾಯ ಹನ್ನೆರಡಾದರೂ ಅರುವತ್ತರ ಗಡಿ ದಾಟಿದವರ ವೈರಾಗ್ಯವಿರಬೇಕೆಂದು ಅವಳ ಆ ಕಟ್ಟಪ್ಪಣೆ. ಹೀಗಾಗಿ ತಂದೆ ಹೊರಟಂದಿನಿಂದ, ದೊಡ್ಡಣ್ಣನಿಗೆ ಪೆಟ್ಟು ತಪ್ಪಲಿಲ್ಲ. ತಂದೆಯಿದ್ದಾಗಲೆ ದೊಡ್ಡಣ್ಣನಿಗೆ ಕಣ್ಣೀರಶನ. ಈಗಳಂತೂ ಹೇಳುವುದೇ ಬೇಡ. ಅವನು ಯಾವ ಕೆಲಸ ಮಾಡಿದರೂ ಅದರ ಫಲವಾಗಿ ದೊರೆ ವುದು ಏಟೇ ಆಗಿತ್ತು. ತನ್ನ ಮನೆಯೊಳಗೆ ಅದರ ಹೊರತಾಗಿ ಇನ್ನೊಂದು ವಸ್ತುವು ದೊರೆಯಬಹುದೆಂದು ಅವನಿಗೆ ಗೊತ್ತಿಲ್ಲ. ಶ್ಯಾಮನ ಮೇಲೆ, ನಡೆದ ಮತ್ತು ನಡೆಯದ ಅಪರಾಧಗಳನ್ನು ಹೊರಿಸುವವಳೂ ಮನೋರಮೆ; ಸಾಕ್ಷ್ಯ ಹೇಳುವವಳೂ ಅವಳೆ; ದಂಡನೆಮಾಡುವ ನ್ಯಾಯಾಧೀಶಪದವಿಯೂ ಅವಳಿಗೇ! ತಾಯಿಲ್ಲದ ಹುಡುಗರ ಮೇಲೆ ಹಗೆತೀರಿಸುವುದಕ್ಕಾಗಿ ಮಾತ್ರ ತಾನು ಲೋಕದಲ್ಲಿ ಜನನಕ್ಕೆ ಬಂದುದೆಂಬಂತೆ ಮನೋರಮೆಯು ಆಡು ತ್ತಾಳೆ. ಆಡಿದಂತೆ ಕೆಲಸದಲ್ಲೂ ಮಾಡುತ್ತಾಳೆ. ಒಮ್ಮೊಮ್ಮೆ ನೆರೆಹಿತ್ತಿ ಲಿಂದ ಮಾವಿನಕಾಯಿಗಳನ್ನು ಕದ್ದ ಸುದ್ದಿ ಬರುವುದು; ದೊಡ್ಡಣ್ಣನ ಮೈಯಲ್ಲಿ ಮಾವಿನಕಾಯಿಗಳಷ್ಟೆ ದೊಡ್ಡ ಗಾಯಗಳೇಳುವುವು. ಮಸಿ ಚೆಲ್ಲಿದ ಕಥೆ ಬರುವುದು; ದೊಡ್ಡಣ್ಣನ ಮುಖದ ಮೇಲೆ ಮಸಿಯಾಗು ವುದು. ಗಡಿಯಾರದ ತಿರುಗಣೆಯನ್ನು ತಿರುಗಿಸಿ ಹಾಳುಮಾಡಿದ ಇತಿ ಹಾಸವು ಹೊರಡುವುದು; ಗಡಿಯಾರದ ತಿರುಗಣೆಯ ಅನುಭವವು ಕಿವಿಗೆ ದೊರೆವುದು. ದೂರುಗಳಲ್ಲಿ ಮುಕ್ಕಾಲುಪಾಲು ಮನೋರಮೆಯ ಕಲ್ಪನಾ ಬಲದಿಂದ ಹುಟ್ಟಿದುವು. ಕೆಲಕೆಲವು ನಿಜವಾದುವು. ಸಣ್ಣ ಪ್ರಾಯಕ್ಕೆ ಭೂಷಣವಾದುವು. ಆದರೆ, ಮನೆಯೊಳಗೆ ಸಣ್ಣ ಪ್ರಾಯದವರು ಹುಟ್ಟ ಬಾರದು; ಅಡಸಿದ ಮೈ, ನರೆತ ಕೂದಲಿನವರಿದ್ದರೆ ಮಾತ್ರ ಮನೆಯು ಮನೆಯೆಂಬುದೆ ಅವಳ ತಿಳಿವಳಿಕೆ. ಎಳೆತನದ ರಕ್ತವು ಹರಿದೋಡುವಾಗ ಮಾಡುವ ನೂರಾರು ತಂಟೆಗಳು ಜೀವನದ ಉಲ್ಲಾಸದ ಚಿಹ್ನೆಗಳೆಂದೂ ಮುಪ್ಪಿನ ವೈರಾಗ್ಯವು ಸ್ಮಶಾನವೈರಾಗ್ಯವೆಂದೂ ಅವಳು ಒಪ್ಪಲಾರಳು.

ಭೀಮರಾಯನು ಸಂಚಾರವನ್ನು ಮುಗಿಸಿ ಇನ್ನೂ ಮನೆಗೆ ಬರಲಿಲ್ಲ ಇದಕ್ಕೆ ದೊಡ್ಡಣ್ಣನ ದುರ್ದೈವವು ಇನ್ನೂ ಮುಗಿಯದುದೇ ಕಾರಣವಾಗಿ

ಬೇಕು. ಒಂದು ದಿನ ಶ್ಯಾಮನು ಸಾಯಂಕಾಲ ಶಾಲೆಯಿಂದ ಬರುವಾಗ ಸ್ವಲ್ಪ ತಡವಾಗಿತ್ತು. ರಾತ್ರಿ ೭ ಘಂಟೆಯ ವರೆಗೆ ಮನೋರಮೆ ಅವನನ್ನು ಎದುರು ನೋಡಿದಳು. 'ಬಂದೆಯೊ ಮಗನೆ' ಎಂದು ಸವಿಮಾತುಗಳ ನ್ನಾಡುವುದಕ್ಕಲ್ಲ. ಬಾಕಿ ಉಳಿದ ದಿನದ ಕಾರ್ಯಕ್ರಮವನ್ನು ಪೂರ್ತಿ ಗೊಳಿಸುವುದಕ್ಕೆ! ಆದರೂ ಶ್ಯಾಮನ ಸುಳಿವಿಲ್ಲ. ಮನೋಹರನನ್ನು ಊಟಕ್ಕೆ ಕರೆದಳು. ದೊಡ್ಡಣ್ಣನೊಟ್ಟಿಗೆ ಊಟಮಾಡಬೇಕೆಂದು ಅವನು ಹಟಹಿಡಿದನು. ಸಿಟ್ಟೆಂದರೆ ಮನೋರಮೆಯ ಒಡಹುಟ್ಟಿದ್ದು. ಹುಡುಗ ನನ್ನು ದರದರನೆ ಎಳೆದು ತಂದು ಎಲೆಯ ಬಳಿಯಲ್ಲಿ ಡಡಮ್ಮನೆ ಇರಿಸಿ ದಳು. ಬಾಯಿಗೆ ಅನ್ನವನ್ನು ತುರುಕಿದಳು. ಮನೋಹರನು ಎರಡು ತುತ್ತು ಅನ್ನವನ್ನು ನುಂಗುವ ಮಧ್ಯದಲ್ಲಿ ಸಾಧ್ಯವಾದಷ್ಟು ಅಳದೆ ಬಿಡ ಲಿಲ್ಲ. ಉಣಿಸುವ ಅನ್ನದ ರುಚಿಯನ್ನು ಹೆಚ್ಚಿಸುವುದಕ್ಕೆಂಬಂತೆ ಬೆನ್ನ ಮೇಲೆ ಮಧ್ಯಮಧ್ಯದಲ್ಲಿ ತಾಯ ಹೊಡೆತವೂ ಬೀಳದಿರಲಿಲ್ಲ. ಊಟ ವಾಗುವಾಗ ಮನೋಹರನಿಗೆ ಸಹಿಸಲಾರದ ಆಯಾಸ; 'ನಿದ್ದೆ ಬರುತ್ತದೆ ನನಗೆ; ಹಾಸಿಗೆಯನ್ನು ಹಾಕಿಕೊಡು,' ಎಂದು ತಾಯೊಡನೆ ಕೇಳಿದುದಕ್ಕೆ, 'ಎಲ್ಲಾದರೂ ಒಂದು ಮೂಲೆಯಲ್ಲಿ ಬೀಳು. ಅಷ್ಟು ಅವಸರವೇನು? ನಾನೂ ಊಟಮಾಡಿಕೊಳ್ಳುತ್ತೇನೆ,' ಎಂದು ಅವಳು ತನ್ನ ಉದರದ ಅರ್ಚನಾದ್ರವ್ಯವನ್ನು ಎಲೆಯ ಮೇಲೆ ಇಕ್ಕಿದಳು. ಇತರ ಕೆಲಸಗಳಂತೆ ಊಟಮಾಡುವುದರಲ್ಲಿಯೂ ಮನೋರಮೆಯ ವೇಗ ಹೆಚ್ಚು. ಕುಳಿತದ್ದೇ ತಡ; ಬಾಳೆಯಿಂದ ಎದ್ದಾಯಿತು. ಉಳಿದ ಕೆಲಸಗಳನ್ನು ನಿಮಿಷದಲ್ಲಿ ಮಾಡಿ ಊಟಕ್ಕೆ ಕೂತಲ್ಲೆ ನಿದ್ದೆಹೋಗಿದ್ದ ಮನೋಹರನನ್ನು ಹಾಸಿಗೆಯ ಮೇಲೆ ಮಲಗಿಸಿದಳು. ತಾನೂ ಒಂದು ಚಾಪೆ ಹಾಕಿಕೊಂಡಳು. ಅಂಗ ಳದ ಕಡೆಯ ಬಾಗಿಲನ್ನು ಬಿಗಿದಳು. 'ಆ ಮಾರಿ ಬಾರದಿದ್ದರೆ ಸಾಯಲಿ,' ಎಂದು, ದೀಪವನ್ನು ನಂದಿಸಿದಳು.

ಒಂದು ಗಂಟೆ ಕಳೆದುಹೋಯಿತು. ಶ್ಯಾಮನು, ಚಿಕ್ಕತಾಯಿಯು ಏನನ್ನುವಳೋ ಎಂಬ ಭೀತಿಯಿಂದ ಗಡಗಡನೆ ನಡುಗುತ್ತಾ ಮನೆಯ ಬಾಗಿಲವರೆಗೆ ಬಂದನು. ಬಾಗಿಲು ಹಾಕಿತ್ತು. ಬಾಗಿಲು ಹೊಡೆದು ಸದ್ದುಮಾಡುವುದಕ್ಕೆ ಧೈರ್ಯ ಸಾಲದು. ಹೊರಗೆ ಮಲಗೋಣವೆಂದರೆ,

ತಿಂದಷ್ಟು ಹಸಿವೆಯಾಗುವ ಪ್ರಾಯದಲ್ಲಿ ಅವನ ಹೊಟ್ಟೆ ಕೇಳಲಿಲ್ಲ. ಚಿಕ್ಕ ತಾಯನ್ನು ಎಬ್ಬಿಸುವುದರ ಪರಿಣಾಮವು ಅವನಿಗೆ ಗೊತ್ತಿತ್ತು. ಅಂತೂ ಇಂತೂ, ಎದೆಯನ್ನು ಗಟ್ಟಿಮಾಡಿ ಬಾಗಿಲನ್ನು ಹೊಡೆದನು. ಚಿಕ್ಕ ತಾಯನ್ನು ಕರೆದನು. ಸುಮಾರು ಅರ್ಧಗಂಟೆಯ ವರೆಗೆ ಕರೆ, ಕೂಗು, ಬಾಗಿಲ ಹೊಡೆತಗಳ ಪರ್ಯಾಯವು ಆದಮೇಲೆ ಒಳಗಣಿಂದ, 'ಯಾರದು?' ಎಂಬ ಕರ್ಣಕಠೋರಗರ್ಜನೆಯೊಂದು ಕೇಳಿಬಂತು.

ಶ್ಯಾಮನು ನಡುಗುದನಿಯಿಂದ, 'ನಾನು!' ಎಂದನು.

'ನಾನೆಂದೊ ನಿನ್ನ ಹೆಸರು?'

'ನಾನು, ಚಿಕ್ಕ ತಾಯಿ! . . . ಶ್ಯಾಮ . . '

'ಬೇಕಾದ ಹಾಗೆ ಬಂದು ಬಾಗಿಲು ಹೊಡೆಯುವುದಕ್ಕೆ ಇದೇನು ಹೋಟೇಲೊ?'

'ಅಲ್ಲ, ತಾಯಿ! ಶಾಲೆಯಲ್ಲೊಂದು ಕೂಟವಿತ್ತು. 'ನಾನು ನಿಂತು ಕೊಳ್ಳುವುದಿಲ್ಲ; ಚಿಕ್ಕತಾಯಿಗೆ ತೊಂದರೆಯಾದೀತು' ಎಂದು ಹೇಳಿದೆ. ಉಪಾಧ್ಯಾಯರು ಕೇಳಲಿಲ್ಲ; ನಿಲ್ಲಲೇಬೇಕೆಂದರು.'

'ಉಪಾಧ್ಯಾಯರ ಮನೆಗೆ ಊಟಕ್ಕೆ ಹೋಗದೆ ಇಲ್ಲಿ ಯಾಕೆ ಬಂದೆ?'

'ಕ್ಷಮಿಸು, ಚಿಕ್ಕಮ್ಮ; ಇನ್ನು ಮುಂದೆ ತಡಮಾಡಿ ಬರುವುದಿಲ್ಲ.'

'ನಿನ್ನ ತಂದೆಯ ಹತ್ತಿರ ಮೊದಲೇ ಸಾರಿ ಹೇಳಿದ್ದೆ; ನಿಮ್ಮ ಮಗನೆಂದರೆ ನನ್ನನ್ನು ಹಿಡಿದ ಪಿಶಾಚಿಯೆಂದು.'

'ಇಲ್ಲ, ತಾಯೆ! ಇಂದು ಒಂದು ಸಲ ಮಾಫಿಮಾಡು, ಇನ್ನು ಮುಂದೆಯೂ ಹೀಗೆಯೇ ಮಾಡಿದರೆ, ಹೇಗೆ ಬೇಕಾದರೂ ಮಾಡು.'

'ಒಂದೊ ನಾನು ಸಾಯಬೇಕು; ಇಲ್ಲದಿದ್ದರೆ ನೀನು ಸಾಯಬೇಕು; ಹೀಗಾಗದೆ ನಿನ್ನ ತಂದೆಗೆ ಬುದ್ಧಿಬರಲಿಕ್ಕಿಲ್ಲ,' ಎಂದು ಯಾವ ಯೋಚನೆಯಿಂದಲೋ ಮೂರನೆಯ ಸ್ಥಾಯಿಯಲ್ಲಿದ್ದ ಸ್ವರವನ್ನು ಸ್ವಲ್ಪ ತಗ್ಗಿಸುತ್ತಾ ಚಿಕ್ಕತಾಯಿಯು ಬಾಗಿಲು ತೆರೆದಳು. ಈ ಹೊತ್ತಿನ ಕಾರ್ಮೋಡ ನಾಲ್ಕಾರು ಹನಿ ಸಿಡಿಸಿ ಮಾಯವಾಯಿತು; ಎಂದು ಮನಸಿನಲ್ಲೆ ಬಗೆ

ಯುತ್ತಾ, ಶ್ಯಾಮನು ಮನೆಯನ್ನು ಪ್ರವೇಶಿಸಿದನು. ಮನೆಯನ್ನು ಹೊಗುವುದಕ್ಕೆ ಚಿಕ್ಕತಾಯಿಯ ಒಪ್ಪಿಗೆ ಸಿಕ್ಕಿದುದೇ ದೊಡ್ಡದೆಂದು ಎಣಿಸುತಿದ್ದ ಅವನ ಹೊಟ್ಟೆಯು, ಒಲೆಯ ಮೇಲಿನ ಎಸರಂತೆ ಕುದಿಯುತಿದ್ದರೂ, 'ನನಗೇನೂ ಹಸಿವೆಯಿಲ್ಲ, ತಾಯಿ. ಊಟ ಮಾಡದಿದ್ದರೂ ಆಗಬಹುದು,' ಎಂದನು. 'ನಿನಗಾಗಿ ಇಟ್ಟ ಅನ್ನವನ್ನು ನಾಳೆ ತಂಗಳುಮಾಡಿ ಯಾರು ತಿನ್ನುತ್ತಾರೆ? ಹೋಗು; ಕೈಕಾಲು ತೊಳೆದುಕೊಂಡು ಬಾ; ಈ ಎಲೆಯಲ್ಲಿ ಇಕ್ಕುತ್ತೇನೆ. ಹಸಿವೆ ಇದ್ದಷ್ಟು ಊಟಮಾಡಿ ಮಲಗಿಕೊ,' ಎಂದು, ಶ್ಯಾಮನು ಬಾವಿ ಕಟ್ಟೆಗೆ ಹೋಗಿ ಬರುವುದರೊಳಗೆ, ಅವನ ಊಟಕ್ಕಾಗಿ ಬಡಿಸಿ ಇಟ್ಟಿದ್ದಳು. 'ಶ್ಯಾಮಾ, ಊಟಮಾಡಿ ಎಂಜಲನ್ನು ಸಾರಿಸಿಬಿಡು, ನಾನು ಮಲಗುತ್ತೇನೆ,' ಎಂದು ತನ್ನ ಸಜ್ಜೆ ಮನೆಗೆ ಹೋದಳು. ಶ್ಯಾಮನಿಗೆ ಊಟ ಸಿಕ್ಕಿದುದಕ್ಕಿಂತಲೂ, ಚಿಕ್ಕತಾಯಿಯ ಮೆದುಮಾತಿನಿಂದ ಹೆಚ್ಚು ಸಂತೋಷವಾಯಿತು. ಆದರೆ ಚಿಕ್ಕತಾಯಿಯ ಎಂದಿಲ್ಲದ ಮಾರ್ದವಕ್ಕೆ ಕಾರಣವೇನೆಂದು ಅವನಿಗೆ ತಿಳಿದಿರಲಿಲ್ಲ. ಚಿಕ್ಕತಾಯಿಯ ಅನುಗ್ರಹಸಂಪಾದನೆಗಿಂತ ಹೆಚ್ಚಿನ ಧ್ಯೇಯವು ಅವನಿಗೆ ಗೊತ್ತಿಲ್ಲ. ಊಟ ತೀರಿಸಿ, ಅವಳು ಹೇಳಿದಂತೆ ಎಂಜಲೆಲೆಯನ್ನು ತೆಗೆದು ನೆಲವನ್ನು ಸಾರಿಸಿ ತನ್ನ ಹಾಸಿಗೆಯಲ್ಲಿ ಬಂದುಬಿದ್ದನು. ಚಿಕ್ಕತಾಯಿಯ ಮೆದುಮಾತನ್ನು ಕೇಳಿದ ದಿನವಾದ್ದರಿಂದ ಶ್ಯಾಮನಿಗೆ ಆ ರಾತ್ರಿ ಒಳ್ಳೆಯ ನಿದ್ದೆ!

೩.

ಮರುದಿನ ಮುಂಜಾನೆ ಮನೋರಮೆ ಎದ್ದಿದ್ದಾಳೆ. ಯಾವಾಗಲೂ ಬೇಗನೆ ಏಳುವ ಸ್ವಭಾವ ಅವಳದು. ನಿನ್ನೆಯ ರಾತ್ರಿಯಂತೂ ನಿದ್ದೆಯಿಲ್ಲ. ಕಣ್ಣಿನಲ್ಲೆ ಬೆಳಗಾಗಿತ್ತು. ಸಂಸಾರ ಸಣ್ಣದಾದರೂ, ಸಣ್ಣದಲ್ಲದ ಗೃಹಕೃತ್ಯದಲ್ಲಿ ಪ್ರಾರಂಭಿಸಿದ್ದಾಳೆ. ಅಂಗಳಕ್ಕೆ ಬಿಸಿಲು ಬಂದಿದೆ. ನೆರೆಹೊರೆಯ ಮನೆಗಳಲ್ಲೆಲ್ಲಾ, ಬೇಗನೆ ಸಿಕ್ಕುವ ಊಟ ಅಥವಾ ಫಲಾಹಾರದ ಚಿಹ್ನೆಯಾದ ಹೊಗೆಯು ಮನೆಮಾಡಿನಿಂದ ಆಕಾಶಕ್ಕೆ ಏಳುತ್ತಿದೆ. ದೊಡ್ಡವರು ತಂತಮ್ಮ ಕೆಲಸಕ್ಕೆ, ಮಕ್ಕಳು ತಂತಮ್ಮ ತಂಟೆಗೆ ಪ್ರಾರಂಭಮಾಡಿದ್ದಾರೆ. ಎಲ್ಲಾ ಕಡೆಗಳಲ್ಲಿಯೂ ಉತ್ಸಾಹ, ಚೈತನ್ಯ, ಆನಂದಗಳ ಲಕ್ಷಣಗಳು.

ಆದರೆ, ಮನೋರಮೆಯು ಮನೆಯೊಳಗೆ ಅದೊಂದೂ ಇಲ್ಲ. ಮನೋಹರನು ಏಳಲಿಲ್ಲ. ತಡಮಾಡಿ ಏಳುವುದು ಅವನ ಪದ್ಧತಿ. ರಾತ್ರಿಯಲ್ಲಿ ಮಲಗಿದ್ದ ಹಾಸಿಗೆಯನ್ನು ಬಿಟ್ಟು, ಹತ್ತು ಅಡಿ ಆಚೆ, ಭೂಶಯ್ಯೆಯೆಲ್ಲವನ್ನೂ ಅವನು ಆಕ್ರಮಣಮಾಡುತಿದ್ದಾನೆ; ಗೊರಕೆಹೊಡೆಯುತ್ತಾನೆ. ದಿನಂಪ್ರತಿ ಎಲ್ಲರೂ ಏಳುವುದಕ್ಕಿಂತ ಮುಂಚೆ ಎದ್ದು, ದಿನಚರ್ಯೆಯಲ್ಲಿ ತೊಡಗುವ ಹುಡುಗ ಶ್ಯಾಮನು ಮಲಗಿದ ಕೋಣೆ ನಿಶ್ಶಬ್ದವಾಗಿದೆ. ಮನೋರಮೆಗೆ ಕೆಲಸದ ಗಡಿಬಿಡಿ. ಶ್ಯಾಮನ ಕೋಣೆಯ ಬಳಿ ಅವಳು ಬರಲೇ ಇಲ್ಲ. ಭೀಮರಾಯನು ಮನೆಯಲ್ಲಿರುತಿದ್ದರೆ, ಶ್ಯಾಮನ ಮೆಯ್ಯನ್ನು ಕುಲುಕಿಸಿ ಎಬ್ಬಿಸುತಿದ್ದ; ಆದರೆ, ಅವನು ಇಲ್ಲವಾದ ಕಾರಣ, ಶ್ಯಾಮನೇಕೆ ಏಳಲಿಲ್ಲವೆಂದು ವಿಚಾರಿಸುವವರಿಲ್ಲ.

ಮನೋಹರನು ನೆಲದ ಮೇಲೆ ಆಚೆ ಈಚೆ ಹೊರಳಾಡಿ, ಫಕ್ಕನೆ ಬೆಚ್ಚಿಬಿದ್ದವನಂತೆ ಎದ್ದು, 'ದೊಡ್ಡಣ್ಣಾ!' ಎಂದು ಕೂಗಿದನು. ಮುಂಜಾನೆ ಎದ್ದ ಕೂಡಲೆ ಕಲ್ಪವೃಕ್ಷವನ್ನು ನೋಡಬೇಕೆಂದು ಹಳಬರು ಹೇಳುತ್ತಾರೆ. ಮನೋಹರನು ಹಾಗೆ ಮಾಡುತಿದ್ದ. ಆದರೆ ಅವನ ಕಲ್ಪವೃಕ್ಷವು ತೆಂಗಿನ ಮರವಲ್ಲ! 'ದೊಡ್ಡಣ್ಣ!'

ಮನೋಹರನ ಕೂಗನ್ನು ಬಳಿಯಲ್ಲಿ ಹೋಗುತಿದ್ದ ಮನೋರಮೆ ಕೇಳಿದಳು. 'ನೋಡು! ನಿನ್ನ ದೊಡ್ಡಣ್ಣನಿಗೆ ಏಳುವುದಕ್ಕೆ ಸಮಯವೇ ಆಗಲಿಲ್ಲ! ಇನ್ನೂ ಮಲಗಿದ್ದಾನೆ. ಹೊತ್ತು ಮೂಡಿ ಹತ್ತು ಗಳಿಗೆಯಾಯಿತು,' ಎಂದಳು.

'ನಿನ್ನೆ ರಾತ್ರಿ ದೊಡ್ಡಣ್ಣ ಬಂದುದು ನನಗೆ ಗೊತ್ತಿಲ್ಲ. ಹೋಗಿ ಎಬ್ಬಿಸುತ್ತೇನೆ,' ಎಂದು ಶ್ಯಾಮನ ಕೋಣೆಯ ಕಡೆಗೆ ಓಡಿಬಂದನು. ಬಂದವನೆ ಅವನ ಹಾಸಿಗೆಯ ಮೇಲೆ ಬಿದ್ದು, 'ದೊಡ್ಡಣ್ಣಾ! ದೊಡ್ಡಣ್ಣಾ! ಗಂಟೆ ಒಂಭತ್ತಾಯಿತು. ಏಳು! ಏಳು!' ಎಂದು ಮೈಯನ್ನು ಕುಲುಕಿದನು. ದೊಡ್ಡಣ್ಣನು ಏಳಲಿಲ್ಲ. ಕೈಯನ್ನು ಹಿಡಿದೆಳೆದನು. ದೊಡ್ಡಣ್ಣನು ಮಿಡುಕಾಡುವ ಲಕ್ಷಣವನ್ನು ತೋರಿಸಲಿಲ್ಲ. 'ದೊಡ್ಡಣ್ಣಾ! ದೊಡ್ಡಣ್ಣಾ!' ಎಂದು ಶಕ್ತಿಯಿದ್ದಷ್ಟು ಬೊಬ್ಬೆಹೊಡೆದನು. ದೊಡ್ಡಣ್ಣನ ಕಿವಿ ಕಿವುಡಾಗಿತ್ತು.

ಅವನ ಮೈಮೇಲೆ ಬಿದ್ದು ಹೊರಳಾಡಿದನು. ದೊಡ್ಡಣ್ಣನ ಮೈ ಕೋಡಿ ಹೋಗಿತ್ತು.

'ತಾಯಿ! ತಾಯಿ! ದೊಡ್ಡಣ್ಣನಿಗೆ ಏನಾಯಿತು ನೋಡು!' ಎಂದು ಮನೋಹರನು ಬೊಬ್ಬೆಹೊಡೆದನು. ಮನೋರಮೆ ಬೆದರಿ ಬೆದರಿ ಅಲ್ಲಿಗೆ ಬಂದಳು. ಮನೋಹರನನ್ನು ಸಂತೈಸುವುದಕ್ಕಾಗಿ ಹುಡುಗನ ದೇಹವನ್ನು ಮುಟ್ಟಿನೋಡಿದಳು. ಮುಸುಕನ್ನು ತೆರೆದು, ಮುಖವನ್ನು ಅವಲೋಕಿಸಿ ದಳು. ಮನೋಹರನು ಅವಸರದಲ್ಲಿ 'ಯಾಕೆ ತಾಯಿ, ದೊಡ್ಡಣ್ಣನು ಏಳುವುದಿಲ್ಲ?' ಎಂದು ಮತ್ತೂಮತ್ತೂ ಕೇಳಿದನು. ಅವಳು, 'ಮನೂ, ಇಲ್ಲಿ ಬಾ; ಒಂದು ಮಾತನ್ನು ಹೇಳುತ್ತೇನೆ,' ಎಂದು, ಹುಡುಗನನ್ನು ಅಲ್ಲಿಂದ ಕರೆದುಕೊಂಡು ಹೋಗುವುದಕ್ಕೆ ಯತ್ನಿಸಿದಳು. ಆಗ ಅವನು, 'ದೊಡ್ಡಣ್ಣನು ಏಳಲಿಲ್ಲ; ನನಗೆ ಬೇಸರವಾಗುತ್ತದೆ; ನಾನು ಬರುವುದಿಲ್ಲ' ಎಂದನು. ಮನೋಹರನು ಕೂತಲ್ಲಿಂದ ಕದಲಲಿಲ್ಲ. ಮನೋರಮೆಗೆ ಏನು ಮಾಡಬೇಕೆಂದು ತೋರಲಿಲ್ಲ. ಇನ್ನೊಮ್ಮೆ ಮುಸುಕನ್ನೆತ್ತಿ ನೋಡಿದಳು. ನೋಡಿ, ಇದುವರೆಗೆ ಬಾರದ ಉದ್ವೇಗವನ್ನು ಈಗ ಒಮ್ಮೆಲೇ ತರಿಸಿಕೊಂಡು 'ಅಯ್ಯೋ, ನಮ್ಮ ಹುಡುಗ ಮಾತಾಡುವುದಿಲ್ಲ! ಬನ್ನಿರಿ! ಬನ್ನಿರಿ!' ಎಂದು ಉಚ್ಚಸ್ವರದಿಂದ ಕೂಗಿದಳು. ಆಗ ಫಕ್ಕನೆ ಆ ಕೋಣೆಯ ಬಾಗಿಲು ತೆರೆಯಿತು. 'ಏನು ಮನೋರಮೆ, ಇದು?' ಎಂದು ಭೀಮರಾಯನೆ ಅಪಳ ಮುಂದೆ ನಿಂತ. ಮನೋರಮೆಯ ದುಃಖಾವೇಶ ಹೆಚ್ಚಿತು. 'ನಿನ್ನೆ ರಾತ್ರಿಯ ವರೆಗೆ ಏನೂ ಇರಲಿಲ್ಲ. ಹೊಟ್ಟೆ ತುಂಬ ಉಂಡು ಮಲಗಿದ್ದ! ಅಯ್ಯೋ, ನನ್ನ ಪ್ರಾರಬ್ಧವೇ!' ಎಂದು, ಭೀಮನ ಹೆಚ್ಚಿನ ಪ್ರಶ್ನೆಗಳಿಗೆ ಆಸ್ಪದವಿಲ್ಲ ದಂತೆ, ತನ್ನ ದುಃಖದೊಡನೆ ಮಾತನ್ನು ಬೆರಸಿದಳು. ಭೀಮನು, 'ಬೊಬ್ಬೆ ಹೊಡೆಯಬೇಡ,' ಎಂದು ಹೇಳಿದ್ದೆ ತಡ; 'ಅಯ್ಯೋ, ಮಗನೆ, ನಿನಗೇನಾ ಯಿತು ಕಂದ! ತಾಯಿಲ್ಲದ ಮಗು! ನನ್ನ ಕೈಗೆ ಸಿಕ್ಕುವಾಗ ಅಂಬೆಗಾಲಿನ ಶಿಶುವಾಗಿತ್ತು! ಇದುವರೆಗೆ ಸಾಕಿದೆ, ಇನ್ನು ನೋಡುವ ಪುಣ್ಯವಿಲ್ಲ ವಾಯಿತು' ಎಂದು, ಇದುವರೆಗೆ ಕಟ್ಟಿತಂದ ದುಃಖದ ಹೊರೆಯನ್ನು ಒಂದೇ ಸರ್ತಿ ಚೆಲ್ಲಿಬಿಟ್ಟಳೋ ಎಂಬಂತೆ, ಪ್ರಲಾಪಿಸುವುದಕ್ಕೆ ತೊಡಗಿದಳು. ಕಣ್ಣೀರು ಧಾರೆಧಾರೆಯಾಗಿ ಸುರಿಯಿತು. ಎದೆಯು, ಒತ್ತುವ ತಿದಿಗಿಂತಲೂ

ಹೆಚ್ಚು ಬುಸುಗುಟ್ಟಿ, ಗಾಳಿಯನ್ನು ಹೊರಸೂಸಿತು. ತನ್ನ ನಿರ್ದೋಷಿತ್ವ ವನ್ನು ಹೇಳುವುದಕ್ಕಲ್ಲದೆ ಬೇರೆ ಯಾವುದನ್ನು ಹೇಳುವುದಕ್ಕೂ ಅವಳಿಗೆ ಮಾತೇ ಬಾರದಂತಾಯಿತು.

ಅಷ್ಟರಲ್ಲಿ ಭೀಮರಾಯನು ಹುಡುಗನ ಮೈಯನ್ನು ಬೇಕಾದ ರೀತಿ ಯಲ್ಲಿ ಪರೀಕ್ಷೆ ಮಾಡಿದನು. ತಾಯಿಯಂತೆ ಅಳುವುದರಲ್ಲಿ ಅರ್ಥವಿಲ್ಲ ವೆಂದು ಮನೋಹರನು ತಂದೆಗೆ ಸಹಾಯಮಾಡುತ್ತಾ, ಆಗಾಗ, 'ಏನಾಯಿ ತಪ್ಪಾ! ಏಕೆ ಅಣ್ಣನು ಏಳುವುದಿಲ್ಲ?' ಎಂದು ಮಧ್ಯಮಧ್ಯದಲ್ಲಿ ಕೇಳು ತಿದ್ದನು. ಮನೋರಮೆಯು ಗೋಳಿಡುತ್ತಾ ಸ್ಮೃತಿಯಿಲ್ಲದಂತೆ ಬಳಿಯಲ್ಲಿ ಬಿದ್ದಿದ್ದಳು. ಕೊನೆಗೆ ಭೀಮರಾಯನು ಕಣ್ಣೀರನ್ನು ತುಂಬಿ, 'ನಿನಗಿನ್ನು ದೊಡ್ಡಣ್ಣನಿಲ್ಲ, ಮನು!' ಎಂದು ಗದ್ಗದವಾಣಿಯಿಂದ ಹೇಳಿದನು. ಈ ಮಾತನ್ನು ಕೇಳಿದ್ದೇ ತಡ, ಮನೋಹರನ ದುಃಖದ ತಂತಿಯನ್ನು ಮೀಟಿ ದಂತಾಯಿತು. 'ದೊಡ್ಡಣ್ಣಾ! ದೊಡ್ಡಣ್ಣಾ!' ಎಂದು ಅವನು ಅತ್ತ ಅಳು ವನ್ನು ಕೇಳಿ ದಾರಿಹೋಕರೂ ನೆರೆಹೊರೆಯವರೂ ಬಂದು, 'ಏನಾಯಿತು, ರಾಯರೇ?' ಎಂದು, ಕಿವಿಯಿಂದ ಕಿವಿಗೆ ಕೇಳಲಾರದ ಪ್ರಶ್ನೆಯನ್ನು ಮಾಡಿ ದರು. ಪ್ರಶ್ನೆಗೆ ಮಾತಿನ ಉತ್ತರವು ಬೇಕಾಗಿರಲಿಲ್ಲ. ಹಾಸಿಗೆಯಲ್ಲಿ ಶ್ಯಾಮನ ನಿಷ್ಪಂದದೇಹ; ಬಳಿಯಲ್ಲಿ ಮನೋರಮೆಯ ದುಃಖಾಭಿನಯ; ಎದುರಲ್ಲಿ, ಏನು ಮಾಡುವುದೆಂದು ತಿಳಿಯದೆ, ಕಲ್ಲಿನ ಮೂರ್ತಿಯಂತೆ ನಿಂತಿದ್ದ ಭೀಮರಾಯನ ಉದ್ವತೋರದ ಆಕಾರ; ಇವನ್ನೆಲ್ಲಾ ನೋಡಿದವರಿಗೆ ವರ್ತಮಾನವು ಏನೆಂದು ತಿಳಿಯುವುದಕ್ಕೆ ಕಷ್ಟವೇ ಆಗಲಿಲ್ಲ.

ದಾರಿಯಲ್ಲಿ ಹಾದುಹೋಗುವ ಯಾರೋ ಒಬ್ಬ ಡಾಕ್ಟರರು ಒಳಗಿನ ಗುಲ್ಲನ್ನು ಕೇಳಿ, ಭೀಮರಾಯನ ಪರಿಚಯವಿದ್ದುದರಿಂದ, ಓಡುತ್ತೋಡುತ್ತಾ ಕೋಣೆಯೊಳಗೆ ಬಂದರು. 'ಭೀಮರಾಯರೇ, ನನ್ನಿಂದೇನಾಗಬೇಕು?' ಎಂದು ಕುತೂಹಲದಿಂದ ಕೇಳಿದರು. ಇದೇ ಸಂದರ್ಭವೆಂದು, ಮನೋ ರಮೆಯು ಬಿಕ್ಕುಮಾತಿಗೆ ಪ್ರಾರಂಭವಾಯಿತು. ಭೀಮರಾಯನು ಒಮ್ಮೆ ಅವಳನ್ನೂ ಒಮ್ಮೆ ಡಾಕ್ಟರರನ್ನೂ ನೋಡುತ್ತಾ, ಮನೋರಮೆಯ ಮಾತಿಗೆ ಮೂಕತೆಯಿಂದ ಸಮ್ಮತಿಕೊಟ್ಟನು. ಡಾಕ್ಟರರು ಹುಡುಗನನ್ನು ಬಲುಬಗೆ ಯಿಂದ ಪರೀಕ್ಷೆ ಮಾಡಿದರು. ಹತ್ತೆಂಟು ಪ್ರಶ್ನೆಗಳನ್ನು ಹಾಕಿ, ಮನೋ

ರಮೆಯ ಮುಖದಿಂದ ತಿಳಿಯಬೇಕಾದ್ದನ್ನು ತಿಳಿದುಕೊಂಡರು. ಕೆಲವು ನಿಮಿಷಗಳ ವರೆಗೆ ಸುಮ್ಮನೆ ಆಕಾಶವನ್ನು ನೋಡುತ್ತಾ ನಿಂತಿದ್ದು, ಮತ್ತೆ, 'ಭೀಮರಾಯರೆ! ಸ್ವಲ್ಪ ಈ ಕಡೆಗೆ ಬನ್ನಿರಿ,' ಎಂದು, ಕೋಣೆಯಿಂದ ಹೊರಗೆ ನಾಲ್ಕಾರು ಮಾರು ದೂರಕ್ಕೆ ಅವನನ್ನು ಕರೆದುಕೊಂಡುಹೋದರು. ಭೀಮರಾಯನು ಗದ್ಗದಕಂಠದಿಂದ, 'ಡಾಕ್ಟರರೆ, ಹುಡುಗನನ್ನು ಬದುಕಿಸುವ ಮಾರ್ಗವಿದ್ದರೆ ಹೇಳಿರಿ, ಸ್ವಾಮಿ!' ಎಂದನು. ಡಾಕ್ಟರರು, 'ಸಮಯವು ಮೀರಿಹೋಯಿತು. ಬಹಳ ವ್ಯಸನವಾಗುತ್ತದೆ,' ಎಂದು ಉತ್ತರಕೊಟ್ಟರು. ಭೀಮರಾಯನ ಹೃದಯದ ಉದ್ವೇಗವು ತುಟಿಯ ನಡುಕವಲ್ಲಿಯೂ, ಕಣ್ಣೀರಿನ ಮಿಡಿತದಲ್ಲಿಯೂ, ಧ್ವನಿಯ ಗದ್ಗದದಲ್ಲಿಯೂ ಪ್ರಕಾಶಹೊಂದಿತು. ಇಂತಹ ಅವಸ್ಥೆಯಲ್ಲಿರುವ ಭೀಮರಾಯನನ್ನು ಇದುವರೆಗೆ ಯಾರೂ ಕಂಡುದಿಲ್ಲ.

ಡಾಕ್ಟರರು ಮಾತಿಗೆ ಪ್ರಾರಂಭಿಸಿದರು: 'ಭೀಮರಾಯರೆ, ಬಹಳ ವ್ಯಸನದ ಸಂಗತಿ; ಆದರೂ ಹೇಳುವುದನ್ನು ಹೇಳಬೇಕಷ್ಟೆ? ಹುಡುಗನಿಗೆ ವಿಷಪ್ರಯೋಗಮಾಡಿದಂತಿದೆ. ಹುಡುಗನ ಮುಖನೋಡಿದರೆ ಗೊತ್ತಾದೀತು. ಮುಂದಿನ ಕೆಲಸವನ್ನು ಬೇಗನೆ ತೀರಿಸಿಬಿಡಿರಿ. ಇಲ್ಲವಾದರೆ ತೊಂದರೆಗೆ ಬಿದ್ದೀತು,' ಎಂದು ಸೂಕ್ಷ್ಮದ ನುಡಿಯನ್ನಾಡಿ ರಸ್ತೆಯನ್ನು ಹಿಡಿದರು.

* * * * * *

ಮನೋಹರನಿಗೆ ಕಠಿನ ಜ್ವರ. ಭೀಮರಾಯನ ಮನೆಯು ಸ್ಮಶಾನದಷ್ಟು ಶೂನ್ಯ; ಭಯಂಕರ. ಈಗ ಎಂದಿನಂತೆ ಸಂಜೆಯ ವೇಳೆಯಲ್ಲಿ ಮನೆಗೆ ಬರುವ 'ದೊಡ್ಡಣ್ಣ'ನಿಲ್ಲ. ಮನೋಹರನ, ಆ ಸಮಯದಲ್ಲಿ ಆಗಬೇಕಾದ, ನಿತ್ಯದ ಸಂತೋಷದ ಬೊಬ್ಬೆಯಿಲ್ಲ. ಮನೋರಮೆಯ ಅಬ್ಬರದ ಮಾತಿಲ್ಲ. ಮನೆಯೊಳಗೆ ಎಲ್ಲೆಲ್ಲಿಯೂ ಶಾಂತಿ. ಶಾಂತಿಯೆಂದರೆ ಭೂಲೋಕದ ಜೀವನದಲ್ಲಿ ಯಾರಿಗಾದರೂ ಆಶೆಯಿದ್ದರೆ, ಆ ಆಶೆಯನ್ನು ಹೀರುವ ಶಾಂತಿ. ಎಡೆಯಲ್ಲಿ ಒಮ್ಮೊಮ್ಮೆ ಭೀಮರಾಯನ ನಿಟ್ಟುಸಿರು. ಮನೋರಮೆಯ ಕಾರಣವಿಲ್ಲದ ಸಿಟ್ಟು. ಇನ್ನು ಸಿಟ್ಟು ಮತ್ತಾರಮೇಲೆ? ಇದುವರೆಗೆ ಮನೋಹರನ ದೊಡ್ಡಣ್ಣನಿದ್ದನು. ಈಗ ಅವನೂ ಇಲ್ಲ. ಈಗಿನ ಸಿಟ್ಟೆಂ

ದರೆ ಗಂಡನ ಮೇಲೆ. ಆ ಮದ್ದು ಸರಿಯಾಗಲಿಲ್ಲ, ಡಾಕ್ಟರರನ್ನು ಕರೆತರಬೇಕಿತ್ತು; ಮಗುವಿಗೆ ಬಾಯಾರಿಕೆಯಾದರೆ ಯಾವುದನ್ನು ಕೊಡಬೇಕೆಂದು ಡಾಕ್ಟರನನ್ನು ಕೇಳಲಿಲ್ಲ; ಎಂದು ಮೊದಲಾಗಿ, ಒಂದಲ್ಲದಿದ್ದರೆ ಇನ್ನೊಂದು ನೆವನದಿಂದ ಗಂಡನನ್ನು ಜರೆದಾಡುವಳು. ಮಧ್ಯಮಧ್ಯದಲ್ಲಿ ಪಶ್ಚಾತ್ತಾಪ! ಕೆಲವೊಮ್ಮೆ 'ದೊಡ್ಡಣ್ಣ'ನ ಭೀಕರಾಕಾರವು ಕಣ್ಣ ಮುಂದೆ ನಿಂತಂತಾಗುವುದು. ಅವನ ಆಕ್ರಂದನವು ಕಿವಿಗೆ ಕೇಳಿದಂತಾಗುವುದು. 'ಇನ್ನೆಂದೂ ಹಾಗೆ ಮಾಡುವುದಿಲ್ಲ, ತಾಯಿ,' ಎಂದು ಹೇಳಿದ ಮಾತು, ಬಾಣದ ಮೊನೆಯಂತೆ, ಎದೆಗೆ ನಾಟಿತ್ತು. ಒಂದು ನಿಮಿಷ ತನ್ನ ಕ್ರೂರ ಮನಸ್ಸನ್ನು ಬಿಗಿಹಿಡಿದು ನಿಲ್ಲಿಸುತಿದ್ದರೆ, ಇಂದು ಶ್ಯಾಮನು ಕಣ್ಣ ಮುಂದೆ ನಲಿದಾಡುತಿದ್ದ! ಮನುವಾದರೂ, 'ದೊಡ್ಡಣ್ಣಾ! ದೊಡ್ಡಣ್ಣಾ!' ಎಂದು ಅವನ ಹಿಂದೆಯೇ ಓಡಾಡುತಿದ್ದ! ಈಗ ಅದೊಂದೂ ಇಲ್ಲ. ಇಂತಹ ಅವಸ್ಥೆ ಬರಲು ಕಾರಣವಾರು? ತಾನೆ! ಎಂದು ಮೊದಲಾಗಿ ಅವಳ ಮನಸ್ಸಿನ ಆಳದಲ್ಲಿದ್ದ ಚಿಂತನೆ.

ನಾಲ್ಕಾರು ದಿನಗಳು ಕಳೆದುವು. ಮನುವಿಗೆ ಸ್ಮೃತಿಯೇ ಬಂದಿರಲಿಲ್ಲ. ಒಮ್ಮೊಮ್ಮೆ ಹುಚ್ಚು ಮಾತಾಡುತಿದ್ದ. 'ದೊಡ್ಡಣ್ಣಾ! ನನ್ನನ್ನು ಬಿಟ್ಟು ಎಲ್ಲಿಗೆ ಹೋದೆ? ಸ್ವಲ್ಪ ತಡೆ! ನಾನೂ ಬರುತ್ತೇನೆ,' ಎಂದು ಆಡುತಿದ್ದ. ಆಗ ಮನೋರಮೆಗೆ ರೋಮಾಂಚವಾಗುತಿತ್ತು. 'ದೊಡ್ಡಣ್ಣ'ನು ಹೋದದ್ದೆಲ್ಲಿಗೆಂದು ಯಾರಿಗೆ ಗೊತ್ತು? ಅವನೊಂದಿಗೆ ಹೋಗುತ್ತೇನೆಂದು ಹೇಳುವ ಹುಡುಗನ ಮಾತನ್ನು ಕೇಳಿದೊಡನೆ ಅವಳ ಹೃದಯವೇ ದ್ರವಿಸುತಿತ್ತು. ಆದರೆ ಮಾಡುವುದೇನು? ಆಕಾಶದಲ್ಲಿ ತೇಲಾಡುತಿದ್ದ ಗಾಳಿಪಟದ ದಾರವನ್ನವಳು ತನ್ನ ಕೈಯಿಂದಲೇ ಕಡಿದಿದ್ದಳು. ಹೀಗೆ ಮಾಡಿದರೆ ಪಟವು ಕೈಮೀರಿ, ಗಾಳಿಯಲ್ಲಿ ತೇಲಿಹೋದೀತೆಂದು ಅವಳಿಗೆ ಗೊತ್ತಿರಲಿಲ್ಲ. ಈಗ ಆ ಭಯವೂ ಉಂಟಾಯಿತು.

ಮನೋಹರನಿಗೆ ಸ್ವಲ್ಪ ಪ್ರಜ್ಞೆ ಬಂತು. ಕಣ್ದೆರೆದು ಸುತ್ತಲೂ ನೋಡಿದನು. ಅಪ್ಪಾ, ದೊಡ್ಡಣ್ಣನು ಇನ್ನೂ ಶಾಲೆಯಿಂದ ಬರಲಿಲ್ಲ?' ಎಂದು ಕೇಳಿದನು. ಬಳಿಯಲ್ಲೇ ಧ್ಯಾನಮಾಡುವವನಂತೆ ಕುಳಿತಿದ್ದ ಭೀಮನು, 'ಇಲ್ಲ, ಮನು' ಎಂದು ಉತ್ತರಕೊಟ್ಟು, ನಿಜ ಸಂಗತಿಯನ್ನು ಮರೆಮಾಜಲು

ಯತ್ನಿಸಿದನು. ಮನೋಹರನು, 'ಅಪ್ಪ, ನನ್ನ ಬಳಿಯಲ್ಲಿಯೆ ಕುಳಿತುಕೋ: ತಾಯಿಯೂ ಕುಳಿತುಕೊಳ್ಳಲಿ,' ಎಂದು ಹೇಳಿದನು. ಮಗನ ಒಂದು ಮಾತು ಕೇಳಿದುದರಿಂದ ಪ್ರಾಣಬಂದಂತಾದ ಮನೋರಮೆ, 'ಏನು ಬೇಕು, ಮಗು, ನಿನಗೆ?' ಎಂದು ಓಡುತ್ತಾ ಬಂದು, ಒಂದು ಗಿಂಡಿಯಿಂದ ಸ್ವಲ್ಪ ಕಾಯಿಸಿದ ಹಾಲನ್ನು ಹುಡುಗನ ಬಾಯಿಗೆರೆದಳು. ಮನೋಹರನು ಒಲ್ಲೆ ನೆಂದನು. 'ಸ್ವಲ್ಪ ಕುಡಿ, ಮನು! ನಿನಗೆ ಬಹಳ ಆಯಾಸವಾಗಿದೆ,' ಎಂದು ತಾಯಿ ಒತ್ತಾಯಮಾಡಿದಳು. 'ದೊಡ್ಡಣ್ಣನನ್ನು ಬಿಟ್ಟು ಕುಡಿಯುವುದಿಲ್ಲ,' ಎಂದವನು ಖಂಡಿತವಾಗಿ ಹೇಳಿದಾಗ, ಮನೋರಮೆಯ ಕಣ್ಣಿನಿಂದ ಸರ್‍ರೆಂದು ಕಣ್ಣೀರು ಧಾರಾಕಾರದಿಂದ ಹರಿಯಿತು.

'ಅಪ್ಪಾ! ದೊಡ್ಡಣ್ಣನು ನಿಮಗೆ ಕಾಣುತ್ತಾನೊ?' ಎಂದು, ಮನೋಹರನು ತಂದೆಯನ್ನು ಪ್ರಶ್ನೆಮಾಡಿದನು. 'ಶಾಲೆಯಿಂದ ಬರಬೇಕಷ್ಟೆ, ಮನು, ನಿನ್ನ ದೊಡ್ಡಣ್ಣ' ಎಂದು ಭೀಮನು ಮರುಮಾತುಕೊಟ್ಟನು. 'ಇದು ಸುಳ್ಳು, ಅಪ್ಪ! ನೋಡು, ನನ್ನ ಕಣ್ಣಮುಂದೆ ನಿಂತಿದ್ದಾನೆ. ದೊಡ್ಡಣ್ಣ ಮಾತಾಡುವುದಿಲ್ಲ. ತಾಯಿ ಬೈದಾಳೆಂದು ಹೆದರುತ್ತಾನೆ,' ಎಂದು ಮನೋಹರನು ಹುಚ್ಚು ಮಾತಿಗೆ ಪ್ರಾರಂಭಿಸಿದನು. ಭೀಮರಾಯನು ಕಣ್ಣೀರನ್ನೊರಸಿದನು. ಮನೋರಮೆಯ ನಿಟ್ಟುಸಿರು ರೋದನವಾಗಿ ಮಾರ್ಪಟ್ಟಿತು.

'ತಾಯಿ! ನನ್ನ ದೊಡ್ಡಣ್ಣನನ್ನು ಇನ್ನು ಮುಂದೆ ಹೊಡೆಯುತ್ತೀಯೋ?' ಎಂದು ಮತ್ತಿನ ಪ್ರಶ್ನೆ.

'ಇಲ್ಲ, ಮನು, ಇಲ್ಲ. ನಿನ್ನ ದೊಡ್ಡಣ್ಣನಲ್ಲವೊ ಅವನು,' ಎಂದು ಮನೋರಮೆ ಹೇಳಿದಳು.

'ಹಾಗಾದರೆ ಕರೆತರುತ್ತೇನೆ. ನೋಡು, ನನ್ನ ಮುಂದೆ ಸ್ವಲ್ಪ ದೂರದಲ್ಲಿ ನಿಂತಿದ್ದಾನೆ. ನಗುತ್ತಾನೆ. ನನ್ನನ್ನು, 'ಮನೂ! ಮನೂ!' ಎಂದು ಕರೆಯುತ್ತಾನೆ,' ಎಂದು ಕೈಗಳನ್ನಾಚೆಗೆ ಚಾಚಿದನು.

ಭೀಮರಾಯನ ಎದೆಗಡಿಯಾರವು ನಿಂತಂತಾಯಿತು. ಮನೋರಮೆಯ ಮೈಯೆಲ್ಲಾ ಬೆವರಿಂದ ಒದ್ದೆಯಾಗಿತ್ತು.

'ಅಪ್ಪ! ನೀವೆಲ್ಲಾ ಸ್ವಲ್ಪ ತಡೆಯಿರಿ. ಅಣ್ಣನನ್ನು ಕರೆತರುತ್ತೇನೆ,' ಎಂದು ಮತ್ತೂ ಮನೋಹರನ ಮಾತು. ಮನೋರಮೆ, 'ಬೇಡ ಮನು! ನಮ್ಮನ್ನು ಬಿಟ್ಟು ಹೋಗಬೇಡ,' ಎಂದು ಚೀರಿದಳು.

'ಅಣ್ಣ ನಗುತಿದ್ದರೂ ಅವನ ನಗೆಯೊಳಗೆ ಸಿಟ್ಟಿದೆ. ನಾನು ಹೋಗದೆ ಅವನ ಸಿಟ್ಟು ಶಾಂತವಾಗದು,' ಎಂದು ಮನೋಹರನು ಆಯಾಸದ ಲಕ್ಷಣಗಳನ್ನು ತೋರಿಸಿದನು.

'ಅಯ್ಯೋ, ನಿನಗೆ ಏನಾಗುತ್ತಿದೆ, ಮನೂ!' ಎಂದು ಭೀಮರಾಯನು ಬೊಬ್ಬಿಟ್ಟನು. ಮನೋರಮೆಯು, 'ಅಯ್ಯೋ, ನನ್ನ ಕಂದಾ!' ಎಂದು ಹೊಟ್ಟೆಯನ್ನು ಹೊಡೆದುಕೊಂಡಳು.

ಮನೋಹರನ ಮುಖವು ಸ್ವಲ್ಪ ವಿಕೃತವಾಯಿತು. ಬಾಯಲ್ಲಿ ಏನೋ ಹೇಳುತಿದ್ದ. ಹೇಳಿದುದೇನೆಂದು ಸ್ಪಷ್ಟವಾಗಲಿಲ್ಲ. ಭೀಮರಾಯನು ಅವನನ್ನು ಹಾಸಿಗೆಯಿಂದೆತ್ತಿ ತನ್ನೆದೆಯ ಮೇಲೆ ಮಲಗಿಸಿಕೊಂಡುದೇ ತಡ; ಮನೋಹರನ ನಾಡಿಗಳಲ್ಲಿ ಸ್ಪಂದನವೇ ಇಲ್ಲದಂತಾಯಿತು. 'ದೊ–ಡ್ಡ–ಣ್ಣ!' ಎಂಬ ಅವ್ಯಕ್ತವಾಣಿಯನ್ನಾಡುತ್ತಾ ಮುಖವು ಒಂದೆಡೆಗೆ ಜೋತುಹೋಯಿತು. ಶ್ವಾಸವು ನಿಂತಿತು. ಕಣ್ಣುಗಳು ತೆರೆದಂತೆ ಇದ್ದುವು. ಅವುಗಳಲ್ಲಿ ಜೀವಕಳೆ ಮಾತ್ರ ಇರಲಿಲ್ಲ.

ಭೀಮರಾಯನು, 'ಅಯ್ಯೋ, ಮನು! ನೀನು ನನ್ನನ್ನು ಕೈಬಿಟ್ಟೆಯಾ?' ಎಂದು ಅವನ ಮೃತದೇಹವನ್ನು ಬಿಗಿಯಪ್ಪಿ, ವಶಗೆಟ್ಟು, ನೆಲದ ಮೇಲೆ ಹೊರಳಾಡಿದನು. ಮನೋರಮೆ ಸ್ಮೃತಿತಪ್ಪಿ ನೆಲದ ಮೇಲೆ ಬಿದ್ದಿದ್ದಳು. ದೊಡ್ಡಣ್ಣನನ್ನು ಕರೆತರುತ್ತೇನೆಂದು ಹೋದ ಮನೋಹರನು ಮತ್ತೆ ಬರಲೇ ಇಲ್ಲ.



# ವಿಮೋಚನೆ



ಸೆರೆಮನೆಯದೊಂದು ಕೊಠಡಿಯಲ್ಲಿ ಒಂದು ಮೇಜಿನ ಬಳಿ ಇಬ್ಬರು ಅಧಿಕಾರಿಗಳು ಕುಳಿತುಕೊಂಡು ಒಂದು ಪತ್ರವನ್ನೋದಿ ಅದರಲ್ಲಿ ಏನೋ ಗುರುತಿಸುತಿದ್ದರು. ಅವರಲ್ಲೊಬ್ಬನು ಕೊತ್ವಾಲನು; ಇನ್ನೊಬ್ಬನು ಅವನ ಕೈಕೆಳಗಿನ ಚೌಕಿ ದಾರನು. ಕೊತ್ವಾಲನು ನಿಧಾನವಾಗಿ ಓದುತ್ತ, ಚಾತುರ್ಯದಿಂದ ವಿಚಾರ ಮಾಡಿ, ಅನಂತರ ಹೆಸರುಗಳನ್ನು ಗುರುತಿಸುತಿದ್ದನು.

ನಡುರಾತ್ರೆಯ ನಿಶ್ಶಬ್ದತೆಯನ್ನೂ ಅಧಿಕಾರಿಗಳ ಆಲೋಚನೆಯನ್ನೂ ಸಮೀಪದ ಕೋಣೆಯಿಂದ ಝುಣಝುಣವೆಂಬ ಶಬ್ದವು ಭೇದಿಸಿತು. ಕೊತ್ವಾಲನು ಈ ಶಬ್ದವನ್ನು ಕೇಳಿ ಸಿಟ್ಟಿನಿಂದ ರೇಗಿದನು. ನಿಮಿಷವೂ ಬಿಡದೆ ಆ ಶಬ್ದವು ಅವನನ್ನು ಸಂಕಟಗೊಳಿಸುತಿತ್ತು. ಪ್ರತಿ ರಾತ್ರಿಯೂ ಆ ಶಬ್ದ ದಿಂದ ಅವನಿಗೆ ನಿದ್ರೆ ಹತ್ತುತಿದ್ದಿಲ್ಲ. ಎಷ್ಟು ರೀತಿಯಲ್ಲಿ ನಿರ್ಬಂಧಿ ಸಿದರೂ ಎಷ್ಟು ರೀತಿಯಲ್ಲಿ ಶಿಕ್ಷೆಗಳನ್ನು ಕೊಟ್ಟರೂ ಬಂದಿಯು ಶೃಂಖಲೆ ಗಳ ಶಬ್ದವನ್ನು ನಿಲ್ಲಿಸಿದ್ದಿಲ್ಲ. ಕೊತ್ವಾಲನು ಪುನಃ ಆ ಶಬ್ದವನ್ನು ಕೇಳಿ ದೊಡನೆಯೆ ಫಟಕ್ಕನೆದ್ದು ಸಿಟ್ಟಿನಿಂದ ಕೈದಿಯಿದ್ದ ಕೋಣೆಗೆ ಹೋಗಿ, ಗಟ್ಟಿಯಾಗಿ, 'ನೀನು ಇನ್ನೂ ಸುಮ್ಮನಿರಲಾರೆಯಾ? ನಿನಗೇಕೆ ಸಾವು ಬಾರದು? ಇಷ್ಟು ಕಠಿಣ ಶಿಕ್ಷೆಯೂ ನಿನಗೆ ಸಾಕಾಗದೇ?' ಎಂದು ಒದರಿ ಕೇಳಿದನು.

**ಕೈದಿ:**—ನಾನೇನೂ ಮಾಡುವುದಿಲ್ಲ.

**ಕೊತ್ವಾಲ:**—ಹಾಗಾದರೆ ಅಂತಹ ಶಬ್ದವನ್ನೇಕೆ ಮಾಡುವಿ?

**ಕೈದಿ:**—ನೀವು ತೊಡಿಸಿದ ಶೃಂಖಲೆಗಳು ಆ ಶಬ್ದವನ್ನು ಮಾಡು ತಿರುವುವು.

**ಕೊತ್ವಾಲ**:— ಅವುಗಳನ್ನೇಕೆ ಬಡಿದು ಶಬ್ದ ಮಾಡುತ್ತೀ?

**ಕೈದಿ**:— ನಾನು ಮತ್ತೇನು ಮಾಡಲಿ?

**ಕೊತ್ವಾಲ**:— ಸ್ವಸ್ಥವಾಗಿ ಮಲಗಿಕೊಂಡಿರು.

ನಿದ್ರೆ ಮಾಡು! ನಿದ್ರೆ ಬರುವುದಾದರೂ ಹೇಗೆ? ಜೋಧಪುರದ ಸ್ವಾತಂತ್ರ್ಯಕ್ಕೆ ಟೊಂಕಕಟ್ಟಿ ಹೋರಾಡಲು ಸಿದ್ಧನಾದ ವೀರನಿಗೆ ನಿದ್ರೆ ಹತ್ತುವ ಬಗೆ ಯಾವುದು? ನಿರ್ದಯರಾದ ಶತ್ರುಗಳು ಬಂದಿಯಾದವನಿಗೆ ಸಹಿಸಲಸದಳವಾದ ಶಿಕ್ಷೆಯನ್ನು ವಿಧಿಸಿದ್ದರು. ಅದೆಲ್ಲವನ್ನೂ ಸಹಿಸಿ, ತನ್ನ ರಾಜ್ಯದ ರಕ್ಷಣೋಪಾಯವನ್ನು ಹುಡುಕುವ ಕಾರ್ಯದಲ್ಲೇ ತತ್ಪರ ನಾಗಿದ್ದನು. ತಾನು ಮಾಡುವ ಝಣಘೋಷವು ಆತನಿಗೆ ಉತ್ಸಾಹಪ್ರದ ವಾಗಿತ್ತು. ಆ ಝಣಘೋಷವು ಆತನಿಗೆ ಆಸೆಯನ್ನು ಹೆಚ್ಚು ಹೆಚ್ಚು ಹುಟ್ಟಿಸುತಿತ್ತು.

ಪುನಃ ಝಣಝಣ ಶಬ್ದ!

ಮತ್ತೊಮ್ಮೆ, ಕೊತ್ವಾಲನು ಸಿಟ್ಟಿನಿಂದ ಕಿಡಿಕಿಡಿಯಾದನು. ಕೊತ್ವಾಲನು ಚೌಕಿದಾರನನ್ನು ಕುರಿತು ಹೀಗೆಂದನು:—'ಈ ಪ್ರಾಣಿಯು ಇಲ್ಲಿಗೆ ಬಂದು ಎಷ್ಟು ದಿನಗಳಾದುವು? ಎಲ್ಲಿಯ ಮೃಗವಿದು? ನಿದ್ರೆಯೇ ಬಾರದ ಈ ನರಪಶುವಾರು?'

'ಇವನು ಯೋಧಪುರದ ನಿವಾಸಿ. ಆ ದುಷ್ಟ ಪಂಗಡಕ್ಕೆ ಸೇರಿದವನು.'

'ಈತನನ್ನು ಗಲ್ಲಕ್ಕೇರಿಸುವುದು ನಾಳೆಗೇ ಅಲ್ಲವೆ?'

'ನ್ಯಾಯಾಧೀಶನ ತೀರ್ಪು ಕೇಳಬೇಕಲ್ಲವೆ?'

ಕೋಣೆಯೊಳಗಿಂದ ಝಣಝಣ ಶಬ್ದವು ಪುನಃ ಕೇಳಿಸಿತು. ಕೊತ್ವಾಲನು ಕ್ರೋಧದಿಂದ ಅಂಧನಾದನು.

'ನಿಲ್ಲು, ನಿಲ್ಲು; ಪ್ರಾತಃಕಾಲವಾಗಲಿ. ಆಗ ಉತ್ತರಕೊಡುವೆನು' ಎಂದನವನು.

* * * * * *

ಮುಂಜಾನೆ ಕೈದಿಗಳಿಗೆಲ್ಲಾ ಆಹಾರವನ್ನು ಕೊಟ್ಟರು. ಕೊತ್ವಾಲನು ಸ್ವತಃ ಬಟ್ಟಲಲ್ಲಿ ಆಹಾರವನ್ನು ತಂದು ಈ ಬಂದಿಯ ಮುಂದಿಟ್ಟನು. ಕೈದಿಯು ಇನ್ನೂ ನಿದ್ರೆಯಿಂದ ಎಚ್ಚತ್ತಿರಲಿಲ್ಲ. ಆದುದರಿಂದ ಸದ್ದುಮಾಡದೆ ಬಾಗಿಲನ್ನು ಮುಚ್ಚಿ ಹೊರಗೆ ಕಾಲಿಟ್ಟನು. ಆದರೂ ಮುಂದರಿಸಲು ಅವನಿಗೆ ಕಾಲೇ ಬರಲಿಲ್ಲ. ಯುವಕನ ಗಂಭೀರವಾದ ಮೊಗವನ್ನು ನೋಡಿ ಅಲ್ಲೇ ನಿಂತುಬಿಟ್ಟನು. ಕೃಶವಾದ ದೇಹದ ಉನ್ನತವಾದ ಲಲಾಟ! ಉಜ್ವಲವಾದ ಕಣ್ಣುಗಳ ಕೊರೆಯುವ ದೃಷ್ಟಿ! ಕೊತ್ವಾಲನು ಭಯಚಕಿತನಾದನು; ನಡುಗಿದನು; ಆದರೆ, 'ಕೈದಿಯೆಚ್ಚತ್ತು ಆಹಾರ ತಿನ್ನುವನು; ಮತ್ತೆ ಬಂದಿವಾನನು ದೀರ್ಘ ನಿಶ್ರಮಾಡುವನು; ಶೃಂಖಲೆಗಳು ನಿಶ್ಶಬ್ದವಾಗುವುವು!' ಎಂದು ತನ್ನಷ್ಟಕ್ಕೆಂದನು.

ಅಷ್ಟರೊಳಗೆ ಬಂದಿಯು ಎದ್ದು, ಕಣ್ಣನ್ನೊರಸಿ ಸುತ್ತಲೂ ನೋಡಿದನು. ಕೊತ್ವಾಲನು ಭಯದಿಂದ ನಡುಗುತಿದ್ದನು. ಅವನ ಧೈರ್ಯವೂ ಪೈಶಾಚಿಕ ಸಂತೋಷವೂ ಅವನ ಹೃದಯದಿಂದ ಮಾಯವಾಗಿದ್ದುವು. ಅವನು ಬಗೆಬಗೆಯಾಗಿ ಕಾತರಗೊಂಡನು. ಮುಖವು ಮ್ಲಾನವಾಯಿತು. ಯೋಧನ ನಿಶ್ಚಲವಾದ ವೀರಾಕೃತಿಯನ್ನು ನೋಡಿ ಅವನ ಹೃದಯವು ಒಮ್ಮಿಂದೊಮ್ಮೆ ಸ್ತಂಭಿತವಾಯಿತು. ಪಾಪಮಾರ್ಗದಲ್ಲಾವಾಗಲೂ ಭಯ; ಧರ್ಮಮಾರ್ಗವು ನಿರಾಪದವಾಗಿದೆ!

ಬಂದಿಯು ಶೃಂಖಲೆಯಿಂದ ಪುನಃ ಶಬ್ದ ಮಾಡಿದನು. ತನ್ನ ಮುಂದಿಟ್ಟ ಆಹಾರದ ಬಟ್ಟಲನ್ನು ಮುಟ್ಟಿದನು. ಶೃಂಖಲೆ ಬಟ್ಟಲಿಗೆ ಬಡೆದು 'ಟಣ್' ಎಂಬ ಶಬ್ದವೂ ಹೊರಟಿತು.

ಕೊತ್ವಾಲನ ಮುಖವು ವಿಕೃತವಾಯಿತು; ಕಾಲುಗಳು ನಿಶ್ಚಲವಾದುವು.

ಬಂದಿಯು ಆಹಾರದ ಒಂದು ತುತ್ತನ್ನು ಕೈಯಲ್ಲಿ ತೆಗೆದನು. ಚಣಗಾಲ ಶೃಂಖಲೆಯು ವಿಶ್ರಮಿಸಿತ್ತು; ಶೃಂಖಲೆಯೇನೊ ಯಥಾಪ್ರಕಾರ ನುಡಿಯಿತು; ಗುಡುಗಿತು!

ಕೊತ್ವಾಲನು ನಡುಗುವ ಸ್ವರದಿಂದ ಕಾತರನಾಗಿ 'ನಿಲ್ಲು, ನಿಲ್ಲು; ಆಹಾರವನ್ನು ತಿನ್ನಬೇಡ' ಎಂದನು.

ಅಪರಾಧಿಗೆ ಆಶ್ಚರ್ಯವಲ್ಲದೆ ಮತ್ತೇನು?

ಪುನಃ ಅಧಿಕಾರಿಯು 'ನಿಲ್ಲು; ನೀನು ಬೇಕಾದಷ್ಟು ಝಣಶಬ್ದವನ್ನು ಮಾಡು; ಆಹಾರವನ್ನು ಮಾತ್ರ ಮುಟ್ಟಬೇಡ,' ಎಂದು ಹೇಳಿ ಒಳನುಗ್ಗಿ ಬಟ್ಟಲನ್ನು ಹಿಂದಕ್ಕೆ ಸೆಳೆದು ಬಾಗಿಲನ್ನು ಮುಚ್ಚಿ ತನ್ನ ಕೊಠಡಿಗೆ ನಡೆದನು.

ಅಪರಾಧಿಗೆ ಆಶ್ಚರ್ಯದ ಮೇಲೆ ಆಶ್ಚರ್ಯ! ಅಪಜಯದ ದವಡೆಯಲ್ಲಿ ಸಿಕ್ಕಿ ನುಂಗಲ್ಪಡುವ ಅವನಿಗೆ ಈ ಜಯವು ಮಹತ್ತಾದುದೆಂದು ಹೇಗೆ ತಾನೆ ಗೊತ್ತು?

೨.

ಹಲವು ದಿವಸಗಳೂ ವಾರಗಳೂ ಕಳೆದುವು. ಒಂದು ದಿನ ಮಧ್ಯಾಹ್ನದ ಸಮಯ. ಅದೇ ಝಣಝಣನಾದವು ಕೇಳಿಸಿತು. ಜೋಧಪುರದ ಬೀದಿಯಿಂದ ಪಹರೆಗಳ ಮಧ್ಯದಲ್ಲಿದ್ದು ಅದೇ ವೀರಪುರುಷನು ನಡೆಯುತಿದ್ದನು. ಅದೇ ಶೃಂಖಲೆಯಿಂದ ಕೈಕಾಲು ಬಂಧಿಸಲ್ಪಟ್ಟಿದ್ದನು. ಅವನ ಹಿಂದಕ್ಕೆ ಕೆಲವರು ಹಾಹಾಕಾರವನ್ನೂ ಹಲವರು ಜಯಘೋಷವನ್ನೂ ಮಾಡಿ ಮುಂದಕ್ಕೆ ನಡೆಯುತಿದ್ದರು.

ಅಪರಾಧಿಯನ್ನು ನ್ಯಾಯಸ್ಥಾನಕ್ಕೆ ಕೊಂಡುಹೋದರು. ನ್ಯಾಯಾಧೀಶನ ವಿಚಾರಣೆಗನುವಾಯಿತು.

'ನೀನು ಯೋಧಪುರದ ನಿವಾಸಿಯೇನು?'

'ನಾನು ಜೋಧಪುರದ ನಿವಾಸಿ.'

'ನೀನು ಉದಯಪುರೀ ರಾಣನ ಸ್ನೇಹಿತನೆ?'

'ನಾನಲ್ಲ. ಅವನ ಪರಿಚಯವು ನನಗಿಲ್ಲ.'

'ನೀನು ನಿನ್ನ ಮಿತ್ರನಿಗೆ ಯುದ್ಧಸಾಮಗ್ರಿಗಳನ್ನು ರವಾನಿಸಿದ್ದುಂಟೆ?'

'ಇಲ್ಲ.'

ಇಷ್ಟು ಸಮಯಕ್ಕೆ ಕೊತ್ವಾಲನು ನ್ಯಾಯಾಧೀಶನ ಬಳಿಗೆ ಹೋಗಿ ಏನೋ ಗೋಪ್ಯವಾಗಿ ಮಾತಾಡಿದನು. ಕೂಡಲೆ ನ್ಯಾಯಾಧೀಶನು ತನ್ನ ತಲೆಯಾಡಿಸಿ ಒಪ್ಪಿಗೆಯ ಸೂಚನೆಯಿತ್ತನು. ಕೊತ್ವಾಲನು ಕೈದಿಯ ಬಳಿಗೆ

ಬಂದನು. ನ್ಯಾಯಸ್ಥಾನವೆಲ್ಲ ನಿಶ್ಶಬ್ದವಾಯಿತು. ಜನರೆಲ್ಲ ಗೊಂಬೆಗಳಂತಾದರು. ಸಮೀಪ ನಿಂತುಕೊಂಡ ಇಬ್ಬರೂ ಒಬ್ಬರನ್ನೊಬ್ಬರು ದಿಟ್ಟಿಸಿ ನೋಡಿದರು. ಇಬ್ಬರೂ ಸಿಟ್ಟಿನಿಂದ ರೇಗಿ ಕಿಡಿಕಿಡಿಯಾಗಿದ್ದರು. ಒಬ್ಬನು ತನ್ನ ಹುದ್ದೆಯ ಪೋಷಾಕನ್ನು ಧರಿಸಿ, ತೀವ್ರ ದೃಷ್ಟಿಯಿಂದ ನೋಡುತಿದ್ದನು. ಇನ್ನೊಬ್ಬನು ಮುಖದಲ್ಲಿ ಗಾಂಭೀರ್ಯವನ್ನೂ ತೇಜಸ್ಸನ್ನೂ ತಳೆದು, ಸೋತರೂ ಗೆದ್ದಿರುವೆನೆಂಬ ಭಾವದ ನಿರ್ಲಕ್ಷ್ಯತೆಯಿಂದ ನೋಡುತಿದ್ದನು. ಫಕ್ಕನೆ ಕೈದಿಯು ತನ್ನ ದೃಷ್ಟಿಯನ್ನು ತಿರುಗಿಸಿ ನೋಡಿದನು. ಆಗಲೇ ಬಳಿ ನಿಂತಿದ್ದ ಅಧಿಕಾರಿಗೆ ಭಯದ ನಡುಕವುಂಟಾಯಿತು. ಕೊತ್ವಾಲನೆಂದನು:—'ನಿನ್ನ ಪರಿಚಯವು ನನಗೆ ಚೆನ್ನಾಗಿದೆ. ನೀನು ಯಶವಂತಸಿಂಗನಲ್ಲವೆ?'

'ಹೌದು. ನೀನು ನನ್ನ ಮಿತ್ರನಾಗಿದ್ದೆಯಲ್ಲವೆ?'

ಏನು? ಮಿತ್ರನು! ಅಧಿಕಾರಿಯು ಬೆಚ್ಚಿಬಿದ್ದು ಕಂಗಾಲಾದನು. ಸರ್ಕಾರೀ ಹುದ್ದೆಯನ್ನು ಪಡೆಯಲೋಸುಗ ಇಷ್ಟೆಲ್ಲಾ ಪಾಪಮಾರ್ಗದಲ್ಲಿ ವರ್ತಿಸುತಿದ್ದನು. ಕೈದಿಯ ಕಾರ್ಯದಲ್ಲಿ ಎಷ್ಟೋ ವೇಳೆ ಹಿಂದೆ ಸಹಕಾರಿಯಾಗಿದ್ದನು. ಅದನ್ನು ಹೇಗೆ ಮರೆತುಬಿಡುವನು? ವಿಷದ ಆಹಾರವನ್ನು ತಂದುಕೊಟ್ಟಾಗ, ಏನೋ ಚಿಂತಿಸಿದ್ದನು. ಆದರೆ, ಮನಸ್ಸೇನೋ ಅನ್ಯಥಾ ಹರಿಯಿತು. ಈಗ ತೆರೆದ ನ್ಯಾಯಸ್ಥಾನದಲ್ಲಿ, ತನ್ನ ಮೇಲಧಿಕಾರಿಗಳ ಸಮಕ್ಷಮದಲ್ಲಿ ಹೇಗದನ್ನು ಒಪ್ಪಿಕೊಂಡಾನು? ಮುಖವೇನೋ ವಿವರ್ಣವಾಯಿತು; ಇವನ ಪೂರ್ವ ಚರಿತ್ರೆಯು ನೆರೆದವರಿಗೆಲ್ಲಾ ದಿಟವಾಯಿತು! ಮಿತ್ರದ್ರೋಹಿಯೆಂದು!!

* * * * * *

ಮರುದಿವಸ ಜಗತ್ತು ಅಂಧಕಾರದಿಂದ ಆವರಿತವಾಯಿತು. ಗಭೀರವಾದ ಧೂಮ್ರವರ್ಣದ ಮೇಘರಾಶಿಯಿಂದ ಆಕಾಶವು ಕವಿಯಿತು. ಮುಸಲಧಾರೆಯಾಗಿ ಮಳೆಯು ಸುರಿಯಿತು. ನಿಮಿಷನಿಮಿಷಕ್ಕೂ ಮಳೆಯು ವೃದ್ಧಿಯಾಗುತಿತ್ತು. ಗಾಳಿಯು ನಿಂತುನಿಂತು, ಹೊಡೆಯುತಿತ್ತು; ಮಧ್ಯೆ ಮಧ್ಯೆ ಗುಡುಗಿನ ಗರ್ಜನೆಯು ಹೊರಟು ಜಗತ್ತನ್ನೆಲ್ಲ ಕಂಪಿತವಮಾಡು

ತಿತ್ತು. ಸೀಳುವ ಮಿಂಚು ಥಳಿಸುತಿತ್ತು. ಅಂತಹ ಭಯಂಕರವಾದ ಕತ್ತಲಲ್ಲಿ, ಮಳೆಗಾಳಿ ಸಿಡಿಲಿನಲ್ಲಿ, ಕೊತ್ವಾಲನು ಹೊರಟನು. ನೊಂದ ಸರ್ಪದಂತೆ ಮುಂದಕ್ಕೆ ಕಾಲಿಟ್ಟನು. ಅವನು ನಿಂತನು. ಗಲ್ಲವೊಂದು ಮುಂದಕ್ಕೆ ನಿಂತಿತ್ತು. ಗಲ್ಲವೂ ಅದಕ್ಕೆ ನೇತಾಡುವ ಶವವೊಂದೂ ಮಿನುಗುವ ಮಿಂಚಿಗೆ ಕಂಡು ಮರೆಯಾಗುತಿದ್ದುವು.

ದೂರದ ಗಾಳಿಯು ಸಮೀಪಕ್ಕೆ ಹರಿದು ಮೊದಲು ಮೆಲ್ಲನೆ, ನಂತರ ಭೀಕರವಾಗಿ ಕೇಳಿತು: 'ಚಿರಕಾಲ ಶಾಂತತೆಯು ಇಲ್ಲಿ ನೆಲೆಯಾಗುವುದು.... ಝುಣಝುಣ ಘೋಷವು ಇಂದಿಗೆ ಕೊನೆಗಂಡಿತಲ್ಲವೆ?'

ಶೂಲದ ಕಂಬದ ಕೀಲಗಳು, ಶವದ ಭಾರಕ್ಕೂ ಬೀಸುವ ಗಾಳಿಗೂ ಕರಕರ ಎಂದು ಬೊಬ್ಬಿಟ್ಟುವು.

ಕೊತ್ವಾಲನು ಕಿವಿ ಮುಚ್ಚಿ ದೂರಕ್ಕೆ ಸರಿದನು; ಸರಿದವನಿಗೆ, ಮಿನುಗಿದ ಮಿಂಚಿನಲ್ಲಿ ತಾಂಡವವಾಡುವ ಶವವು ಕಂಡಿತು; ಝುಣಘೋಷ ಮಾಡದೆ ನೆಟ್ಟಗೆ ನೇತಾಡುವ ತನ್ನ ಮಿತ್ರನ ಶವವು ಕಂಡಿತು. ಮಿಂಚು ಅಣಗಿತು; ಕತ್ತಲೆ ಕೂಡಿತು; ಕೊತ್ವಾಲನು ಮುನ್ನಡೆದನು.

ಶವದ ನೇಣನ್ನು ಬಿಚ್ಚಿದನವನು! ಶವವು ದೊಪ್ಪನೆ ಕೆಳಬಿದ್ದಿತು. ನೇಣನ್ನು ತನ್ನ ಕೈಯಲ್ಲೆ ಹಿಡಿದನು. ಕೂಡಲೆ, ಗುಡುಗಾಡಿತು; ಮಿಂಚು ಥಳಿಸಿತು; ಮಳೆ ಗಾಳಿ ಬೀಸಿತು; ಎಲ್ಲವೂ ಗಡಿಬಿಡಿ; ಎಲ್ಲೆಲ್ಲೂ ಭೀಕರ ಆರ್ಭಟೆ! ಎಲ್ಲೆಲ್ಲೂ ಅಂಧಕಾರ!!

* * * * * *

ಮರುದಿನ ಬೆಳಗ್ಗೆ ಮಳೆ ನಿಂತಿತ್ತು; ಗಲ್ಲದ ಕೆಳಗಲ್ಲಿ ಎರಡು ಶವಗಳು ಮಾತ್ರ ಕಾಣುತಿದ್ದುವು. ಪ್ರಕೃತಿಯು ಶಾಂತವಾಗಿದ್ದಳು. ಶವಗಳ ಮುಖದಲ್ಲೂ ಶಾಂತಿ ಕಾಣುತಿತ್ತು.



*

# ಕೂಲಿ



ನ್ನೆ ಸಂಜೆ ತಾನೆ ತಿಂಗಳ ಕೂಲಿ ದೊರೆತುದು. ಇಂದು ರವಿವಾರ; ಬಿಡುವಿದೆ. ಅಮಾವಾಸ್ಯೆಯ ಸಮುದ್ರ ಸ್ನಾನ ಬೆಳಗ್ಗೇ ಮುಗಿಯಿತು. ಗಂಡ-ಹೆಂಡರಿಗೆ ಇಂದು ಉಪವಾಸ; ಮಕ್ಕಳಿಗೆ? ತಿಂಗಳಿಗೊಮ್ಮೆ ಸಂತೆಯಿಂದ ಕಾಳು ಎಣ್ಣೆ ತಂದುದು ನಿನ್ನೆಗೇ ಮುಗಿದಿದೆ. ಆದರೂ, ನಿನ್ನೆ ಉಳಿದ ತಂಗೂಳು ಮಕ್ಕಳಿಗೆ ಅರೆಹೊಟ್ಟೆಯ ಬದುಕು, ಸಾಕು. ಗಂಡನು ಮುಂದಣ ತಿಂಗಳಿಗಾಗಿ ಜೀನಸು ತರುವನು. ಹೆಂಡತಿ ಗುಡಿಸಲಲ್ಲಿ ಮಕ್ಕಳನ್ನು ಹೇಗೂ ತಣಿಸಿ, ಹಾದಿ ಕಾಯುವಳು.

ಸಂತೆಗೆ ಹೋದ ಗಂಡನು ತನ್ನಂತಹ ಹತ್ತು ಮಂದಿಯನ್ನು ಕಂಡ ಬಳಿಕ, ಅವರೊಡನೆ ಬೆರೆದಾಡಿದನು. ಊರವರಿಗೆ ಮೂರು ಹೊತ್ತಿಗೆ ಒಂದೂಟ ಕಷ್ಟವಾದರೂ, ಮಾರಿಗೊಂದು ಹೆಂಡದಂಗಡಿ ಇದ್ದಿತು. ಹೆಂಡದಿದಿರಲ್ಲಿ ಹೆಂಡತಿಯೇ? ರೊಕ್ಕ ಕೈಯಲ್ಲಿ ಜಣಜಣಿಸುವಾಗ, ಮಕ್ಕಳ ಮಾತೇ? ಹನ್ನೊಂದೂ ಮಂದಿ ಜನರು, ಹೆಂಡಿರನ್ನು ಮರೆತು, ಹೊಟ್ಟೆ ತುಂಬ ಹೆಂಡವನ್ನೆ ತುಂಬಿಸಿಕೊಂಡರು.

ಮಧ್ಯಾಹ್ನ ಮೀರಿತು, ಇಳಿ ಹೊತ್ತಾಯಿತು. ಉಪವಾಸಿ ತಾಯಿ ಹೇಗೂ ಇರುವಳು; ಮಕ್ಕಳು? ಅವರಿಗಿಷ್ಟು ಎಳನೀರ ಅಮೃತ, ತಿರುಳು. ಬೆಳಗ್ಗೆ ಅರೆಹೊಟ್ಟೆ, ಸಂಜೆಗೆ ಕಾಲು ಹೊಟ್ಟೆ. ಆದರೂ, ಹಸಿವು ಹೆಚ್ಚುತ್ತ ಬಂದಂತೆ, ಅಳುವೂ ದಣಿದಂತೆ, ತಾಯಿ ಮುದ್ದಿಸಿ ನುಡಿದಂತೆ, ಕತ್ತಲಿಳಿವಾಗ ಮಕ್ಕಳು ಒಳಕೋಣೆಯಲ್ಲಿ ನಿದ್ದೆ ಹೋದುವು. ತಾಯಿ ಬಾಗಿಲು ಮುಚ್ಚಿ, ಬಳಿಯಲ್ಲೇ ಕಾದು ಕುಳಿತಳು. ಅವಳಲ್ಲಿ ವ್ಯಥೆಯೊ, ಅಂಜಿಕೆಯೊ?

ತಾಯಿಗೂ ಕಣ್ಣು ರೆಪ್ಪೆ ಭಾರವಾಗುತ್ತ ಬಂದಿತು; ಕುಟುಂಬದ ಭಾರ ಹೆಗಲ ಮೇಲೆ, ಮಮತೆಯ ಭಾರ ಹೃದಯದೊಳಗೆ, ಉಪವಾಸ–ವ್ಯಥೆ–ನಿರೀಕ್ಷೆಗಳ ಭಾರ ಅವಳನ್ನು ಕಂಗೆಡಿಸಿತು. ಅವಳಿಗೆ ನಿದ್ದೆ ಹತ್ತದಂತೆ ಎಚ್ಚರಿಸುತಿತ್ತೊಂದು ಗೂಗೆ! ಅದರ ಹೂಂಕಾರಕ್ಕಿಂತ ಭಾರವಾಗಿ ಕಠೋರವಾಗಿ ಬಾಗಿಲಾಚೆಯ ಹೂಂಕಾರ ಕೇಳಿಸಿತು. ಏನೋ ಆಡಿದಂತಾಯಿತು; ಅದೇನೊ ಅಸ್ಪಷ್ಟ.

ಬಾಗಿಲು ತೆರೆದಳು. ಗಂಡ; ಯಜಮಾನ! ದಾರಿಯುದ್ದಕ್ಕೂ ಕೈಬೀಸಿ ಬರುತಿದ್ದರೂ, ಹಾದಿಯೆಲ್ಲ, ಹಳ್ಳದಿನ್ನೆಯೆಂದು ಅವನ ಕಾಲುಗಳು ಸೋತು, ಜತೆಕಟ್ಟಿದ್ದುವು. ನುಗ್ಗುತ್ತಾನೆ; ಇವಳು ತಡೆಯುತ್ತಾಳೆ. ಒಳಕೋಣೆಯಲ್ಲಿ ಹೇಗೂ ಪ್ರಪಂಚದ ಅರಿವಿಲ್ಲದೆ ನಿದ್ರಿಸಿದ ಎಳಗೂಸುಗಳು ಇವನನ್ನು ಕಂಡರೆ? ಛೆ, ಕಾಣಬಾರದು! ತಡೆದೇ ಹೋರಾಡಿದಳು, ಹೋರಾಡಿ ಅಡ್ಡಗಟ್ಟಿದಳು.

ನಿನ್ನೆ ತಂದ ಕೂಲಿ ಒಳಕೋಣೆಯಲ್ಲಿದೆ. ತರುವೆನೆಂದನವನು, ಕೊಡದೆಂದಳಿವಳು. ತಾರೆಂದು ಆರ್ಭಟಿಸಿದನು; ಬಾಯಿಗೆ ಕೈಹಿಡಿದು, ತರುವುದಿಲ್ಲವೆಂದು ಖಂಡಿತ ನುಡಿದಳಿವಳು. ಅವನು ಯಾವಾಗಲೂ ಹದ ಮಾತಿನವ; ಈಗ? ಅವಳ ಕೈ ಸೆಳೆದು, ಕೂದಲೆಳೆದು, ಕಾಲುತಪ್ಪಿಸಿ, ಕೆಡೆಬೀಳಿಸಿ, ಎದೆಯ ಮೇಲೇ ಮಂಡಿಯೂರಿ, ಕೊರಳೊತ್ತಿದನು. ಮಿಣಿಮಿಣಿ ದೀಪದ ಬೆಳಕು ಅವನ ಕಣ್ಣಿಗಿಂತ ಕಡಿಮೆ ಕೆಂಪಗೆ ಇದ್ದಿತಾದರೂ, ಅವಳ ಮೋರೆಯ ಮೇಲೆ ಒಸರಿದ ನೆತ್ತರು ಇನ್ನಷ್ಟು ಕೆಂಪಗಿತ್ತು.

ನೆತ್ತರು ನೋಡಿ, ಅಮಲಿಳಿಯಿತೊ? ಅವನು ಎದ್ದು, ಬೇಸರಿಸಿ, ಉದಾಸೀನನಾಗಿ, ದಣಿದು ಅಲ್ಲೇ ಹರಡಿದ್ದ ಚಾಪೆಯ ಮೇಲೆ ಹೇಗೊ ಬಿದ್ದುಕೊಂಡನು.

ಗದ್ದಲ ಕೇಳಿ, ಮಕ್ಕಳೆಚ್ಚತ್ತುಕೊಂಡುವು. ಎಚ್ಚರವಾದೊಡನೆ ಹಸಿವೂ ಆಯಾಸವೂ ಹೆಚ್ಚಿದುವು. ಮಕ್ಕಳು ಕೂಗಿದುವು. ತಂದೆಗೆ ಪ್ರಪಂಚದ ಅರಿವೇ ಇಲ್ಲ; ಮೈಮೇಲಣ ಅರಿವೆಯಂತೆ?

ತಾಯಿ ಕಣ್ತೆರೆದಳು. ಮಿಣುಕುದೀಪವಿದೆ; ಇನ್ನೂ ಆರಿಲ್ಲ. ಮಕ್ಕಳ ಕೂಗಿದೆ; ಇನ್ನೂ ಮೌನವಿಲ್ಲ. ಕೈಕಾಲು ಮುಟ್ಟಿ ನೋಡಿದಳು; ಎಲ್ಲವೂ

ಸರಿಯೇ ಇದೆ. ಒಳಕೋಣೆಯ ಬಾಗಿಲು ತೆರೆದು, ಮಕ್ಕಳನ್ನು ಅಲ್ಲೇ ಸಂತವಿಟ್ಟಳು; ಎಚ್ಚತ್ತುದನ್ನೇ ಮರೆತು, ಅವು ನಿದ್ದೆಹೋದುವು.

ಮಕ್ಕಳ ಆರೈಕೆ ಮುಗಿಸಿ, ಹೊರಕೋಣೆಗೆ ಬಂದಳು. ಇವಳು ತಾಯಿ ಮಾತ್ರವೆ? ಹೆಂಡತಿಯೂ ಅಲ್ಲವೆ? ಗಂಡನ ಕಡೆಗೆ ಮೆಲ್ನಡೆಯಿಂದ ಚಾಪೆಯ ಬಳಿಗೆ ಬಂದು ನೋಡಿದಳು; ಅಮಲಿನಿಂದಾದ ವಿಕಾರವನ್ನಲ್ಲ; ಚಾಚಿ ಬಿದ್ದಾತನ ತಲೆ, ಅಡಿಯಲ್ಲಿದ್ದ ಮಣೆಯ ಅಂಚಿನ ಹೊರಗೆ ಉಳುಕಿದಂತೆ ನೀಡಿದೆ! ತೊಟ್ಟಿಲ ಕೂಸಿನ ನಿದ್ದೆ ಕೆಡದಂತೆ, ತಲೆಗಿಂಬಿಡು ವಂತೆ, ಅವನ ತಲೆಯನ್ನು ಸರಿಪಡಿಸಿದಳು.

ಮುಂದೆ ಮುಗುಳ್ನಕ್ಕು, ಅರ್ಧ ಕಿತ್ತು ಬಿದ್ದಿದ್ದ ತನ್ನ ಕೂದಲನ್ನು ನೆಲದಿಂದೆತ್ತಿ ಅಡಗಿಸಿದಳು!

ಇಷ್ಟೆ ಅವಳ ಕೂಲಿ!

